# ಕರಾವಳಿ ಜಿಲ್ಲೆಗಳ ಗೊಮ್ಮಟಮೂರ್ತಿಗಳು

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು
ಮಲ್ಲಿಕಾ ಕುಮಾರಿ

ಮಾರ್ಗದರ್ಶಕರು
ಡಾ. ಪಾ. ನ. ಮಯ್ಯ

೨೦೦೪

ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ
ಮಂಗಳೂರು-೫೭೫೦೦೧

# ಕರಾವಳಿ ಜಿಲ್ಲೆಗಳ ಗೊಮ್ಮಟಮೂರ್ತಿಗಳು

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು
ಮಲ್ಲಿಕಾ ಕುಮಾರಿ



ಮಾರ್ಗದರ್ಶಕರು
ಡಾ. ಪಾ. ನ. ಮಯ್ಯ

೨೦೦೯

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ,
ಮಂಗಳೂರು-೫೭೫೦೦೧

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ. ಫಿಲ್ ಪದವಿಗಾಗಿ ಸಾದರಪಡಿಸಿದ ಕರಾವಳಿ ಜಿಲ್ಲೆಗಳ ಗೊಮ್ಮಟಮೂರ್ತಿಗಳು ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಪಾ. ನ. ಮಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

MR
**ಮಲ್ಲಿಕಾ ಕುಮಾರಿ**
ಸಂಶೋಧಕರು
ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ, ಮಂಗಳೂರು



# ಯೋಗ್ಯತಾ ಪತ್ರ

ಮಲ್ಲಿಕಾ ಕುಮಾರಿ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಕರಾವಳಿ ಜಿಲ್ಲೆಗಳ ಗೊಮ್ಮಟ ಮೂರ್ತಿಗಳು ಒಂದು ಸಾಂಸ್ಕೃತಿಕ ಅಧ್ಯಯನ - ಎಂಬ ಶೀರ್ಷಿಕೆಯ ಈ ಸಂಪ್ರಂಬಂಧವನ್ನು ಎಂ.ಫಿಲ್. ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

**ಡಾ. ಪಾ. ನ. ಮಯ್ಯ**
ಸಂಶೋಧನ ಮಾರ್ಗದರ್ಶಕರು
ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ, ಮಂಗಳೂರು



# ಪರಿವಿಡಿ

## ಅಧ್ಯಾಯ - ೧



## ಅಧ್ಯಾಯ - ೨



## ಅಧ್ಯಾಯ - ೩

## ಅಧ್ಯಾಯ - ಒಂದು

# ಕರಾವಳಿ ಜಿಲ್ಲೆಗಳ ಗೊಮ್ಮಟಮೂರ್ತಿಗಳು ಒಂದು ಸಾಂಸ್ಕೃತಿಕ ಅಧ್ಯಯನ

## ೧. ೧ - ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ನಾಡಿನ ಚರಿತ್ರೆಯ ಅಧ್ಯಯನದ ಸಂದರ್ಭದಲ್ಲಿ ಅದಕ್ಕೆ ಪರಿಪೂರ್ಣತೆಯನ್ನು ನೀಡುವ ಪ್ರಧಾನ ಅಂಶವೆಂದರೆ, ಅಲ್ಲಿನ ಜನರ ವರ್ತನೆ ಮತ್ತು ಅವರ ಸಾಮಾಜಿಕ ಬದುಕು ಕಟ್ಟಿಕೊಡುವ ರೀತಿಯನ್ನು ಹಿಡಿದು ಅವರ ಸಾಂಸ್ಕೃತಿಕ ಜೀವನದ ಎಲ್ಲಾ ಒಳಪದರಗಳನ್ನು ಮುಟ್ಟಿ ಅವರ, ವಿಚಾರ, ಭಾವನೆಗಳನ್ನು ತೂಗಿ ನೋಡಿ ಮೌಲ್ಯಗಳನ್ನು ಗುರುತಿಸುವುದು. ಇತಿಹಾಸ ಮನುಷ್ಯನ ಮೂಳೆ, ಮಾಂಸವಾದರೆ, ಅದಕ್ಕೆ ಜೀವತುಂಬುವ ಕೆಲಸವನ್ನು ಸಂಸ್ಕೃತಿ ಮಾಡುತ್ತದೆ. ಈ ಹಿನ್ನಲೆಯಲ್ಲಿ ಒಂದು ಜನಾಂಗದ ಸಂಸ್ಕೃತಿಯ ಅಧ್ಯಯನವು ಮೌಲಿಕವಾಗಿರುತ್ತದೆ.

ಉತ್ತರ ಭಾರತದಿಂದ ಆಗಮಿಸಿದ ಜೈನ ಧರ್ಮವು ತುಳುನಾಡಿನಲ್ಲಿ ಬಹುಕಾಲದಿಂದಲೂ ನೆಲೆನಿಂತಿದೆ. ಈ ನಾಡಿನ ಚರಿತ್ರೆಯ ಜೊತೆಯಲ್ಲಿ ತನ್ನನ್ನು ಪೂರ್ತಿಯಾಗಿ ತೊಡಗಿಸಿಕೊಂಡಿದೆ. ತುಳುನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವೆಂದರೆ, ಜೈನಧರ್ಮದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸವೆನ್ನಬಹುದು. ಅಷ್ಟರಮಟ್ಟಿಗೆ ಜೈನಧರ್ಮವು ತುಳುನಾಡಿನ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ ಗಾಢವಾದ ಪ್ರಭಾವವನ್ನು ಬೀರಿದೆ. ತುಳು ಸಂಸ್ಕೃತಿಯ ಒಡಲಲ್ಲಿ ಜೈನ ಸಂಸ್ಕೃತಿಯ ಬೇರುಗಳು ಹಾಸು ಹೊಕ್ಕಾಗಿ ಬೆಸೆದು, ಬೇರ್ಪಡಿಸಲಾರದಷ್ಟು ಆಳವಾಗಿ ಹರಡಿಕೊಂಡಿದೆ. ತುಳುನಾಡಿನ ಸಾಮಾನ್ಯ ಮನುಷ್ಯನೋರ್ವನ ದಿನನಿತ್ಯದ ಉಸಿರಾಟದ ಲಯದಲ್ಲಿಯೂ ಈ ಸಂಬಂಧದ ಸುಳಿವುಗಳನ್ನು ಹೆಕ್ಕಿ ತೆಗೆಯುವಷ್ಟರ ಮಟ್ಟಿಗೆ ಸಹಜವಾಗಿ ಸಮ್ಮಿಳಿತಗೊಂಡಿದೆ. ಜೀವನ ವಿಧಾನ, ಆಚರಣೆ, ನಂಬಿಕೆ, ಆಹಾರ, ಉಡುಗೆ - ತೊಡುಗೆ, ಭಾಷೆ ಈ ಎಲ್ಲದರ ಅಂತರ್ ಶಿಸ್ತಿನಲ್ಲೂ ಜೈನ ಸಂಸ್ಕೃತಿಯ ಹೊಂದಾಣಿಕೆಯನ್ನೂ ಅರಳುವಿಕೆಯನ್ನೂ ಗುರುತಿಸಬಹುದು.

## ೧. ೨ - ವಿಷಯದ ಆಯ್ಕೆಗೆ ಕಾರಣಗಳು

ನಮ್ಮಲ್ಲಿ ಸಂಸ್ಕೃತಿಯೆಂಬ ಶಬ್ದವು ಈಗಾಗಲೇ ಸಾಕಷ್ಟು ಚರ್ಚೆಗೆ ಗ್ರಾಸವಾಗಿದೆ. ಅನೇಕ ವಿದ್ವಾಂಸರು ಸಂಸ್ಕೃತಿ ಮತ್ತು ನಾಗರಿಕತೆಗಿರುವ ಸಾಮ್ಯ ವೈಷಮ್ಯಗಳನ್ನು ತಲಸ್ಪರ್ಶಿಯಾಗಿ ಚರ್ಚಿಸಿದ್ದಾರೆ. ಇದರ ಚರ್ಚೆಗೆ ಹೋಗದೆ, ನಾವು ಬಳಸಿಕೊಂಡಿರುವ ಅರ್ಥದ ಹಿನ್ನೆಲೆಯನ್ನಷ್ಟೇ ವಿವರಿಸಬಯಸುತ್ತೇನೆ. ಸಂಸ್ಕೃತಿಯೆಂಬ ಮಾತು

ಇತ್ತೀಚಿನದಾಗಿದ್ದು ಇಂಗ್ಲಿಷಿನ Culture ಎಂಬ ಶಬ್ದಕ್ಕೆ ಸಮಾನಾರ್ಥಕವಾಗಿ ನೂರು ವರ್ಷಗಳಿಂದೀಚೆಗೆ ಬಳಸುತ್ತಿದ್ದೇವೆ. ಆದರೆ Culture ಎಂಬ ಪದ ಒಳಗೊಂಡಿರುವ ಅರ್ಥಕ್ಕಿಂತ ಹೆಚ್ಚು ವ್ಯಾಪ್ತಿಯ ಅರ್ಥವನ್ನು ಸಂಸ್ಕೃತಿಯೆಂಬ ಪದವು ಒಳಗೊಂಡಿದೆ ಎಂಬುದಾಗಿ ಕೆಲವು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. Culture ಪದವನ್ನು ಮೊಟ್ಟಮೊದಲು ನಿಖರವಾಗಿ ಪ್ರಯೋಗಿಸಿದವನು ಮಾನವ ಶಾಸ್ತ್ರದ ಪಿತಾಮಹನೆನಿಸಿಕೊಂಡ ಇ. ಬಿ. ಟೈಲರ್ (Primitive Culture - ೧೮೭೧) ಜೈವಿಕ ರೂಪದ ಪ್ರಾಣಿವರ್ಗಗಳಿಂದ ಮನುಷ್ಯನನ್ನು ಬೇರ್ಪಡಿಸಬಲ್ಲ ಒಂದೇ ಒಂದು ಅಂಶವೆಂದರೆ ಸಂಸ್ಕೃತಿ. ಪ್ರಾಣಿಗಳಿಗೆ ಸಂಸ್ಕೃತಿ ಇಲ್ಲ. ಮನುಷ್ಯನಿಗೆ ಸಂಸ್ಕೃತಿಯಿದೆ. ಈ ಮಾತಿನಿಂದ ಸಂಸ್ಕೃತಿ ಎಂದರೇನು ಎಂಬುದು ಮನದಟ್ಟಾಗುತ್ತದೆ. ಸಂಸ್ಕೃತಿಯೆಂಬುದು ಮುಖ್ಯವಾಗಿ ಅಂತರಂಗದ ವಿಕಾಸಕ್ಕೆ ಸಂಬಂಧಿಸಿದುದು. ಮನುಷ್ಯನಲ್ಲಿಯ ಮೃಗತ್ವವನ್ನು ಹೋಗಿಸಿ, ಮಾನವೀಯತೆಯನ್ನು ಸ್ಥಾಪಿಸುವುದು ಇದರ ಗುರಿ. ಟಿ. ಎಸ್. ಎಲಿಯಟ್ ಹೇಳುವಂತೆ (Notes towards the definition of culture Page - 13) ಸಂಸ್ಕೃತಿಯೆಂಬುದು ಒಂದು ಜನಾಂಗದ ಸಮಸ್ತ ಕ್ರಿಯೆಗಳನ್ನು ಅಭಿರುಚಿಗಳನ್ನೂ ಒಳಗೊಳ್ಳುತ್ತವೆ. ಜನರು ತಾವು ಗಳಿಸಿದ ಉತ್ತಮವಾದ ಮೌಲ್ಯಗಳನ್ನೆಲ್ಲ ಮುಂದಿನ ಜನಾಂಗಕ್ಕೆ ದಾಟಿಸುತ್ತ ಬರುತ್ತಾರೆ. ಮ್ಯಾಥ್ಯೂ ಅರ್ನಾಲ್ಡ್‌ನು ಹೇಳುವಂತೆ ಉತ್ತಮ ಆಲೋಚನೆ, ಭಾವನೆ ಅನುಸರಿಸುವ ಪದ್ಧತಿ. ಇತರರ ಬೆಳಕಿನಲ್ಲಿ ನಮ್ಮನ್ನು ನಾವು ತಿದ್ದಿಕೊಳ್ಳುವ, ಉತ್ತಮಪಡಿಸಿಕೊಳ್ಳುವ ಪ್ರಯತ್ನ ಹೆಚ್ಚು ಆನಂದ, ಬೆಳಕು, ಅನುಕಂಪೆಯುಳ್ಳ ಅಂತರಂಗಿಕ ಆತ್ಮ ಸಂಬಂಧಿಯಾದ ಕ್ರಿಯೆ. ಅದು ವ್ಯಕ್ತಿ ವಿಕಸನಕ್ಕೆ ನಾಂದಿಯಾಗುವಂತೆ, ಸುಸಂಸ್ಕೃತ ಸಮಾಜ ಸೃಷ್ಟಿಗೂ ಕಾರಣವಾಗುತ್ತದೆ. ಈ ಅರ್ಥದಲ್ಲಿ ರವೀಂದ್ರನಾಥ ಠಾಗೂರರು (Civilization and progress. PP.42.58) ಹೇಳುವಂತೆ, ಸಂಸ್ಕೃತಿಯೆಂಬುದು ಆಕಸ್ಮಿಕ ಮೊತ್ತವಲ್ಲ. ಪರಿಪೂರ್ಣತೆಯ ದಿವ್ಯದರ್ಶನದ ಅಭಿವ್ಯಕ್ತಿ. ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿ ಧರ್ಮವೇ ಆಗಿದೆ. ಅದು ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಿಗೊಂಡು ಸಂಸ್ಕೃತಿಯಾಗಿದೆ ಎಂದಿದ್ದಾರೆ. ಈ ದೃಷ್ಟಿಯಿಂದ ಒಂದು ಜನಾಂಗದ ಸಾಂಸ್ಕೃತಿಕ ಅಧ್ಯಯನವೆಂದರೆ, ಸಮಗ್ರ ಬದುಕಿನ ಜೊತೆಗೆ, ಆ ಬದುಕನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಧಾರ್ಮಿಕತೆಯ ನೆಲೆಗಳು ಕೂಡಾ ಅತೀ ಮುಖ್ಯ ಅಧ್ಯಯನ ಯೋಗ್ಯ ವಿಷಯವಾಗುತ್ತದೆ. ಸಮಾಜದ ಪರಿಧಿಯಲ್ಲಿ ಕಾಲಕಾಲಕ್ಕೆ ಉಂಟಾದ ಜೀವನ ಕ್ರಮದ ಬದಲಾವಣೆ, ಬದುಕನ್ನು ಪ್ರತಿನಿಧಿಸುವ ಇತಿಹಾಸ, ಕಲೆ ಎಲ್ಲವೂ ಇದರಲ್ಲಿ ಸೇರಿಕೊಳ್ಳುತ್ತದೆ. ತಮ್ಮ ಬದುಕಿನ ಸಂದರ್ಭದಲ್ಲಿ ನಿರ್ಮಿಸಿಕೊಂಡ ಜೈವಿಕ-ಅಜೈವಿಕ ಸಾಧನ ಸಂಪತ್ತುಗಳ ಜೊತೆಗೆ ಆ ಜನಾಂಗವು ಕಟ್ಟಿಕೊಂಡ ರಕ್ತ ಸಂಬಂಧ, ವ್ಯಕ್ತಿಸಂಬಂಧ, ವಂಶ, ಗೋತ್ರ, ವಿವಾಹ, ಹುಟ್ಟು-ಸಾವು, ದೇವರು, ಆತ್ಮ, ಆಚರಣೆ, ನಂಬಿಕೆ, ಸೌಂದರ್ಯ ಪ್ರಜ್ಞೆ, ಮೌಲ್ಯಗಳು, ಶಿಕ್ಷಣ, ಅನ್ಯ ಸಂಸ್ಕೃತಿಯ ಸ್ವೀಕಾರ - ಹೀಗೆ ಹತ್ತು ಹಲವು ವಿಷಯಗಳು ಸುತ್ತುವರಿದು, ಸಂವಹನಗೊಂಡು ಸಂಸ್ಕೃತಿಯೊಂದನ್ನು ರೂಪಿಸಿಕೊಳ್ಳುತ್ತದೆ. ಒಟ್ಟು ಸಮಾಜದ ಸಮಷ್ಟಿ ಬದುಕಿನ ನಡುವೆ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಳ್ಳುತ್ತದೆ. ಆದುದರಿಂದ ಕರಾವಳಿಯ ಗೊಮ್ಮಟಗಳು ಒಂದು ಸಾಂಸ್ಕೃತಿಕ ಅಧ್ಯಯನವನ್ನು ಈ ಹಿನ್ನೆಲೆಯಲ್ಲಿ ಕೈಗೆತ್ತಿಕೊಳ್ಳಲಾಗಿದೆ.

ಇಂದು ಸಾಂಸ್ಕೃತಿಕ ಅಧ್ಯಯನಗಳು ತನ್ನ ಆಳ, ವಿಸ್ತಾರವನ್ನು ಹೆಚ್ಚಿಸಿಕೊಂಡು ಗಂಭೀರವಾಗಿ ಮುನ್ನಡೆಯುತ್ತಿವೆ. ಬೇರೆ ಬೇರೆ ಆಯಾಮಗಳಿಂದ ತಲಸ್ಪರ್ಶಿಯಾಗಿ ನೋಡುವ ತೂಗಿ ವಿಮರ್ಶಿಸಿ ಪರೀಕ್ಷಿಸುವ, ತೌಲನಿಕವಾಗಿ ಒರೆಹಚ್ಚುವ ದಿಕ್ಕಿನತ್ತ ಚಲಿಸುತ್ತಿದೆ. ಒಟ್ಟು ಅಧ್ಯಯನದಲ್ಲಿ ಆಂತರಿಕ ಶಿಸ್ತನ್ನು ಕಾಯ್ದುಕೊಂಡು ಜಾಗತಿಕ ಮಟ್ಟದಲ್ಲಿ ಪಾರದರ್ಶಕವಾಗಿ ನೋಡುವ ಪ್ರವೃತ್ತಿಯೂ ಕಂಡುಬರುತ್ತಿದೆ. ನನ್ನ ಅಧ್ಯಯನದಲ್ಲಿ ಇಂತಹ ಒಂದು ಪ್ರಯತ್ನ ಮಾಡಿದ್ದೇನೆ. ತುಳುನಾಡಿನ ಧಾರ್ಮಿಕ ಪರಂಪರೆಯ ಹಿನ್ನೆಲೆಯಲ್ಲಿ ವಿಭಿನ್ನ ಜನಾಂಗಗಳ ವಿವಿಧ ಸಂಸ್ಕೃತಿಗಳ ಜೊತೆಗೆ ಜೈನಧರ್ಮವನ್ನಿಟ್ಟು ತೌಲನಿಕವಾಗಿ ನೋಡಲು, ವಿಷಯದ ವಿಸ್ತಾರದ ದೃಷ್ಟಿಯಿಂದಲೂ ಹಾಗೂ ನನ್ನ ಅಧ್ಯಯನದ ವ್ಯಾಪ್ತಿಗೆ ಮೀರಿದ್ದರಿಂದಲೂ ಸಾಧ್ಯವಾಗಲಿಲ್ಲ. ಆದರೆ, ಸಮಾನವಾದ ಅಂಶಗಳನ್ನು ಪ್ರಾಸಂಗಿಕವಾಗಿ ಚರ್ಚಿಸಲಾಗಿದೆ. ಜೈನಧರ್ಮವೊಂದನ್ನೇ ಪ್ರಧಾನವಾಗಿ ತೆಗೆದುಕೊಂಡು, ಅದರ ಚಾರಿತ್ರಿಕ ಇತಿವೃತ್ತಗಳ ಜೊತೆಗೆ, ಸಾಂಸ್ಕೃತಿಕ ಒಳಮೈ ಆಯಾಮಗಳನ್ನೂ ಪದರುಗಳನ್ನೂ ಶೋಧಿಸಿ, ವಿಶ್ಲೇಷಿಸುವುದರ ಕಡೆಗೆ ಹೆಚ್ಚು ಗಮನ ನೀಡಿದ್ದೇನೆ. ವಿಷಯಕ್ಕೆ ಸಮಗ್ರತೆ ಮತ್ತು ಸ್ಪಷ್ಟತೆಯಿರಬೇಕು ಎಂಬ ಕಾರಣದಿಂದ, ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಜೈನಧರ್ಮದ ಹಿನ್ನೆಲೆ, ಹುಟ್ಟು, ಬೆಳವಣಿಗೆ ಮತ್ತು ಅದು ನೀಡಿದ ಕೊಡುಗೆಗಳನ್ನೂ ಕರಾವಳಿ ಜಿಲ್ಲೆಗಳಿಗೆ ಆಗಮಿಸಿ ಇಲ್ಲಿ ಪಡೆದುಕೊಂಡ ಮಹತ್ವ ಹಾಗೂ ನೀಡಿದ ಕೊಡುಗೆಗಳನ್ನೂ ಸಮೀಕ್ಷಿಸಿ, ಆ ವಿಷಯದ ಮುಂದುವರಿಕೆಯ ರೂಪದಲ್ಲಿ ಕರಾವಳಿಯ ಗೊಮ್ಮಟಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ೧. ೩ - ತುಳುನಾಡಿಗೆ ಜೈನಧರ್ಮದ ಆಗಮನ

ತುಳುನಾಡಿಗೆ ಜೈನಧರ್ಮದ ಆಗಮನದ ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ. ನಿರ್ಧಿಷ್ಟವಾಗಿ ಗುರುತಿಸಲು ಸರಿಯಾದ ಆಧಾರಗಳು ದೊರೆಯಲಿಲ್ಲ. ಗೋವಿಂದ ಪೈಗಳ ಅಭಿಪ್ರಾಯ ಈ ರೀತಿ ಇದೆ. ಭದ್ರಬಾಹುಮುನಿಯ ಜೊತೆಗೆ ಉತ್ತರ ಭಾರತದಿಂದ ದಕ್ಷಿಣಭಾರತಕ್ಕೆ ಆಗಮಿಸಿದ ಸಂಪ್ರತಿ ಚಂದ್ರಗುಪ್ತನ ಕಾಲದಲ್ಲಿ ಅಂದರೆ ಕ್ರಿ.ಪೂ. ಸುಮಾರು ೨೫೦ರಲ್ಲಿ ಶ್ರವಣಬೆಳಗೊಳದಲ್ಲಿ ನೆಲೆನಿಂತ ಜೈನಧರ್ಮವು ಅಲ್ಲಿಂದ ಕೆಲವು ಶತಮಾನಗಳ ನಂತರ ತುಳುನಾಡಿಗೆ ಬಂದಿರಬೇಕು ಎಂದಿದ್ದಾರೆ.

ತುಳುನಾಡಿಗೆ ಚರಿತ್ರೆಯ ಮೇಲೆ ವಿಶೇಷವಾಗಿ ಸಂಶೋಧನೆ ನಡೆಸಿದ ಡಾ। ಸಾಲೆತ್ತೂರು, ತುಳುನಾಡಿನಲ್ಲಿ ಸಿಗುವ ಪ್ರಾಚೀನ ಶಾಸನಗಳನ್ನು ಆಧರಿಸಿ, ಕ್ರಿ. ಶ. ೯ನೇ ಶತಮಾನದಲ್ಲಿ ಜೈನ ಧರ್ಮವು ತುಳುನಾಡನ್ನು ಪ್ರವೇಶಿಸಿರಬೇಕೆಂಬ ನಿರ್ಧಾರಕ್ಕೆ ಬಂದಿದ್ದಾರೆ.

ಇತ್ತೀಚಿನ ಸಂಶೋಧನೆಯ ಫಲವಾಗಿ, ಬನವಾಸಿಯ ಕದಂಬರ ಕಾಲದಲ್ಲಿ ಜೈನಧರ್ಮವು ತುಳುನಾಡಿನಲ್ಲಿ ಇತ್ತೆಂದೂ ಹಲವಾರು ಮುನಿಸಂಘಗಳು ಕಾರ್ಯಪ್ರವೃತ್ತವಾಗಿದ್ದವೆಂದೂ ಹೇಳಲಾಗುತ್ತಿದೆ.

ಒಟ್ಟಿನಲ್ಲಿ ಹೇಳುವುದಾದರೆ, ದಕ್ಷಿಣ ಕರ್ನಾಟಕದಲ್ಲಿ ಜೈನಧರ್ಮವು ೮, ೯ನೇ ಶತಮಾನದಲ್ಲಿ ಬಂದು ಬೆಳವಣಿಗೆ ಹೊಂದಿರಬೇಕೆಂದು ಹೇಳಬಹುದು.[4]

## ತುಳುನಾಡಿಗೆ ಜೈನಧರ್ಮದ ಸ್ವರೂಪ

ಜೈನಾಚಾರ್ಯರು ಪ್ರತಿಪಾದಿಸಿರುವ ಮೂಲತತ್ವಗಳ ಆಧಾರದ ಮೇಲೆ ತುಳುನಾಡಿನ ಜೈನಧರ್ಮವು ಪೂರ್ಣವಾಗಿ ಅವಲಂಬಿತವಾಯ್ತು. ಆರಂಭದ ಕಾಲಘಟ್ಟದಲ್ಲಿ ಅದು ಹೊಸ ಸೈದ್ಧಾಂತಿಕ ತತ್ವಗಳನ್ನಾಗಲೀ, ಆಚರಣೆಗಳನ್ನಾಗಲೀ ಪ್ರತಿಪಾದಿಸಲಿಲ್ಲ. ಆ ಬಳಿಕ ಸ್ಥಳೀಯ ಸಂಸ್ಕೃತಿ ಪ್ರಭಾವದಿಂದ, ಕೆಲವು ಆಚರಣೆಗಳನ್ನು ಸಾಂದರ್ಭಿಕವಾಗಿ ಸ್ವೀಕರಿಸಿಕೊಂಡು ಸಮನ್ವಯದ ದಾರಿಯನ್ನು ಹಿಡಿಯಿತು.

ವೃಷಭದೇವನಿಂದ ಮೊದಲ್ಗೊಂಡು ಮಹಾವೀರನವರೆಗೆ ಆಗಿ ಹೋದ ೨೪ ಜನ ತೀರ್ಥಂಕರರು ಉಪದೇಶಿಸಿದ ಜೈನಧರ್ಮವು ಅವಿಭಕ್ತವಾಗಿತ್ತು. ಮಹಾವೀರನಿಂದ ಈಚೆಗೆ ಮೂಲಧರ್ಮವು ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪಂಗಡಗಳಾಗಿ ಒಡೆದಿದ್ದವು. ದಿಗಂಬರರು ಹೇಳುವಂತೆ, ಕೊನೆಯ ಶ್ರುತಕೇವಲಿಯಾದ ಭದ್ರಬಾಹುವಿನ ಕಾಲದಲ್ಲೂ ಜೈನಧರ್ಮದ ಆಚರಣೆಯಲ್ಲಿ ವ್ಯತ್ಯಾಸಗಳಿರಲಿಲ್ಲ. ಎರಡು ಪಂಗಡಗಳಾಗಿ ಒಡೆದ ಬಳಿಕ ಕೆಲವು ವ್ಯತ್ಯಾಸಗಳು ಹುಟ್ಟಿಕೊಂಡವು.

ಭದ್ರಬಾಹು ಚಂದ್ರಗುಪ್ತರ ಕಾಲದಲ್ಲಿ ಉತ್ತರ ಭಾರತದಿಂದ ಆಗಮಿಸಿದ ಜೈನಧರ್ಮವು ಶ್ರವಣಬೆಳಗೊಳಕ್ಕೆ ಬಂದು ನೆಲೆನಿಂತು, ಆ ಬಳಿಕ ತುಳುನಾಡಿಗೆ ಆಗಮಿಸಿತು. ತಮ್ಮ ಧ್ಯಾನ, ತಪಸ್ಸಿಗೆ ಅನುಕೂಲವಾಗುವಂತೆ ಜೈನಮುನಿಗಳು ಎತ್ತರವಾದ ಬೆಟ್ಟಗುಡ್ಡಗಳಲ್ಲಿ ನೆಲೆನಿಂತರು. ತುಳುನಾಡಿನ ಎತ್ತರ ಭಾಗಗಳಾದ ಕುರಳಿಕುಂದ, ಅಲೆವೂರು, ವರಾಂಗ, ಶಿಶಿಲ ಮುಂತಾದ ಭಾಗಗಳು ದಟ್ಟಕಾನನಗಳಿಂದ ಆವೃತವಾಗಿ ಪ್ರಶಾಂತ ವಾತಾವರಣ ನೆಲೆಸಿದ್ದರಿಂದ ಇವನ್ನೇ ಆಯ್ದುಕೊಂಡರು. ಕ್ರಮೇಣ ಈ ಮುನಿಗಳ ಧರ್ಮೋಪದೇಶದಿಂದ ಪ್ರಭಾವಿತರಾಗಿ, ಆಕರ್ಷಿತರಾಗಿ ಸ್ಥಳೀಯ ಜನಸಾಮಾನ್ಯರು ಈ ಧರ್ಮವನ್ನು ಸ್ವೀಕರಿಸಿದರು. ಜೊತೆಗೆ ಈ ಮೊದಲೇ ಕರ್ನಾಟಕದ ಪ್ರಾಚೀನ ಅರಸರಾದ ಗಂಗ, ಕದಂಬ, ಚಾಳುಕ್ಯ, ರಾಷ್ಟ್ರಕೂಟರು ಜೈನಧರ್ಮಕ್ಕೆ ಆಶ್ರಯ ನೀಡಿ ಮತ್ತು ಸ್ವೀಕರಿಸಿ ಪ್ರೋತ್ಸಾಹವನ್ನೂ ನೀಡಿದ್ದರು. ಇಲ್ಲಿಯ ಅರಸರೊಡನೆ ಸಂಬಂಧವನ್ನು ಬೆಳೆಸಿಕೊಂಡಾಗ ಸ್ವಾಭಾವಿಕವಾಗಿಯೇ ಜೈನ ಧರ್ಮವು ಇಲ್ಲಿಯೂ ರಾಜಾಶ್ರಯವನ್ನು ಪಡೆದುಕೊಂಡಿತು. ಪ್ರಾಚೀನ ಅಲೂಪರು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರು. ಅಲೂಪರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿದ ಪಟ್ಟಪೊಂಬುಚ್ಚದ ಶಾಂತಾರರು ಸ್ವತಃ ಜೈನಮತಾವಲಂಬಿಗಳಾಗಿದ್ದರು. ಎಲ್ಲಕ್ಕಿಂತ ಮುಖ್ಯವಾಗಿ ತುಳುನಾಡಿನಲ್ಲಿ ಹೊರಗಿನಿಂದ ವ್ಯಾಪಾರಕ್ಕಾಗಿ ಆಗಮಿಸಿದ ಜೈನವರ್ತಕ ಸಂಘಗಳು ಈ ಧರ್ಮದ ಪ್ರಚಾರ ಮತ್ತು ಬೆಳವಣಿಗೆಯ ಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದವೆಂದು ಹೇಳಬಹುದು.

## ೧. ೪ - ಈವರೆಗೆ ನಡೆದ ಅಧ್ಯಯನ ಮತ್ತು ಅದರ ಇತಿಮಿತಿಗಳು

ಇಲ್ಲಿಯ ಜೈನ ಸಂಸ್ಕೃತಿಯನ್ನು ಕುರಿತು ತಳಮಟ್ಟದ ಮತ್ತು ಸ್ವತಂತ್ರ ರೂಪದ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ತುಳುನಾಡಿನ ಚರಿತ್ರೆಯ ಮೇಲೆ ಅಧ್ಯಯನ ನಡೆಸಿದ ಹೆಚ್ಚಿನ ವಿದ್ವಾಂಸರು, ಇಲ್ಲಿಯ ರಾಜಕೀಯ

ಚರಿತ್ರೆಯನ್ನು ರೂಪಿಸುವಲ್ಲಿ ಹೆಚ್ಚು ಆಸ್ಥೆಯನ್ನು ತಳೆದಿದ್ದಾರೆ. ಆದರೂ ಅವರ ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಜೈನಧರ್ಮದ ಇತಿಹಾಸದ ವಿವರಗಳು ಸುರುಳಿ ಬಿಚ್ಚಿಕೊಳ್ಳುತ್ತವೆ. ಇಲ್ಲಿ ಆಳ್ವಿಕೆ ನಡೆಸಿದ ಪ್ರಾಚೀನ ಆಲೂಪರು, ಹೊಯ್ಸಳರು, ವಿಜಯನಗರ ಅರಸರು ಜೈನಧರ್ಮಕ್ಕೆ ಹೆಚ್ಚು ಪ್ರಾಶಸ್ತ್ಯ ಮತ್ತು ಪ್ರೋತ್ಸಾಹಗಳನ್ನು ನೀಡಿದ್ದರಿಂದ ಹಾಗೂ ಇಲ್ಲಿರುವ ಒಂದೆರಡು ಅರಸರನ್ನು ಬಿಟ್ಟರೆ, ಉಳಿದ ಎಲ್ಲಾ ಸ್ಥಳೀಯ ತುಂಡರಸರು ಜೈನ ಮತೀಯರಾಗಿರುವುದರಿಂದ ಸ್ವಾಭಾವಿಕವಾಗಿಯೇ ಅವರ ಅಧ್ಯಯನಗಳು ಜೈನ ಸಂಸ್ಕೃತಿಯ ಸುತ್ತ ಚಲಿಸುತ್ತವೆ. ಆರಂಭದ ಹಂತದಲ್ಲಿ ರಚನೆಗೊಂಡಿರುವ ಸ್ಟರ್ರ್ಕ್ ಜೆ. ಅವರ South Canara District - Manual (೧೮೯೪) ಮತ್ತು ಮದ್ರಾಸ್ ಸರಕಾರವು ಹೊರತಂದಿರುವ South Canara Gazetter (೧೯೩೮) ಗ್ರಂಥಗಳಲ್ಲಿ ತುಳುನಾಡಿನ ರಾಜಕೀಯ, ಸಾಮಾಜಿಕ, ಜನಾಂಗೀಯ ವಿವರಗಳು ಪ್ರಸ್ತಾವಿಸಲ್ಪಟ್ಟಿವೆ. ವಿವಿಧ ಜನರನ್ನು ಪರಿಚಯಿಸುವಾಗ ಜೈನಮತೀಯರ ಕುರಿತು ಕೆಲವು ವಿವರಗಳು ದೊರೆಯುತ್ತವೆ.

ಕನ್ನಡದಲ್ಲಿ ಬಂದಿರುವ ಕೆಲವು ಗ್ರಂಥಗಳನ್ನೂ ಇಲ್ಲಿ ಉಲ್ಲೇಖಿಸಬಹುದು. ಶೀನಪ್ಪ ಹೆಗ್ಗಡೆ ಅವರು ಬರೆದಿರುವ ದ. ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು (೧೯೧೫), ಶ್ರೀನಿವಾಸ ಕಿಣಿಯವರ ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆಸಾರ (೧೯೨೯), ಗಣಪತಿ ರಾವ್ ಐಗಳ್ ಅವರ ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ (೧೯೨೩) ಈ ಮೂರು ಗ್ರಂಥಗಳನ್ನು ಇಲ್ಲಿ ನೆನೆಯಬಹುದು. ಇವುಗಳಲ್ಲಿ ಐಗಳ್ ಅವರ ಗ್ರಂಥವು ಅತ್ಯಮೂಲ್ಯವಾದ ಮಾಹಿತಿಯನ್ನೊಳಗೊಂಡಿದೆ. ತಮಗೆ ದೊರೆತಿರುವ ಅನೇಕ ಐತಿಹ್ಯಗಳು, ಜನಪದ ಕಥೆಗಳು, ಕೈಫಿಯತ್ತು, ಶಾಸನ ಇತರ ದಾಖಲೆಗಳನ್ನೆಲ್ಲ ಕಲೆಹಾಕಿ ದಕ್ಷಿಣಕನ್ನಡದ ಇತಿಹಾಸವನ್ನು ಕಟ್ಟಿಕೊಟ್ಟಿದ್ದಾರೆ. ಜೈನ ತುಂಡರಸರ ಚರಿತ್ರೆಯನ್ನು ಸಾಕಷ್ಟು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ತಮ್ಮ ಗ್ರಂಥದ ಕೊನೆಯಲ್ಲಿ ತಾವು ಸಂಗ್ರಹಿಸಿದ್ದ ದಾಖಲೆಗಳನ್ನು ಯಥಾವತ್ತಾಗಿ ನೀಡಿದ್ದಾರೆ. ಆ ಬಳಿಕ ಬಂದ ಕೇಶವ ಕುಡ್ವರ ದಕ್ಷಿಣ ಕನ್ನಡದ ಇತಿಹಾಸ (ತುಳುವ ಚರಿತ್ರೆ) (೧೯೪೮), ಸೂತಕ ಗೋತ್ರ ವಿಚಾರ (೧೯೫೦), ವೇಣೂರಿನ ಗತ ವೈಭವ (೧೯೫೦), ಶೀನಪ್ಪ ಹೆಗಡೆ ಮತ್ತು ನಾರಾಯಣ ಕಿಲ್ಲೆಯವರ 'ಪ್ರಾಚೀನ ತುಳುನಾಡು' (೧೯೫೪), ಗುರುರಾಜ ಭಟ್ಟರ ತುಳುನಾಡು (೧೯೬೩) ಮುಂತಾದ ಗ್ರಂಥಗಳನ್ನು ಕೂಡ ಗಮನಿಸಬಹುದಾಗಿದೆ. ಈ ಕೃತಿಗಳು ತುಳುನಾಡನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ನಡೆಸಿದ್ದರೂ, ಅಲ್ಲಲ್ಲಿ ಜೈನ ಪರವಾದ ಕೆಲವು ಸಂಗತಿಗಳನ್ನು ಉಲ್ಲೇಖಿಸುತ್ತವೆ. ಗುರುರಾಜ ಭಟ್ಟರ ತುಳುನಾಡು ಕೃತಿಯಲ್ಲಿ ೧೬ ಅಧ್ಯಾಯಗಳಿವೆ. ತುಳುನಾಡಿನಲ್ಲಿರುವ ಮೂಲ ಜನಾಂಗಗಳ ಬಗ್ಗೆ ಅವರು ಚರ್ಚೆ ನಡೆಸಿದ್ದಾರೆ. ಇವುಗಳಲ್ಲಿ ತುಳುನಾಡಿನಲ್ಲಿ ಜೈನಧರ್ಮ (ಪು. ೧೮೬) ಎಂಬ ಲೇಖನವು ಜೈನಧರ್ಮದ ಆಗಮನದ ಬಗ್ಗೆ ವಿಶೇಷವಾಗಿ ಚರ್ಚಿಸುತ್ತದೆ. ಕೃತಿಗಳು ಚಿಕ್ಕವಾದರೂ ಜೈನ ಸಂಸ್ಕೃತಿಯ ಬಗ್ಗೆ ಉಪಯುಕ್ತ ಮಾಹಿತಿಯನ್ನು ನೀಡುವಲ್ಲಿ ಗಮನಿಸಬೇಕಾದ ಗ್ರಂಥಗಳಾಗಿವೆ. ಇದೇ ಮಾದರಿಯಲ್ಲಿ ಡಾ। ಕೆ. ವಿ. ರಮೇಶರು ಬರೆದ 'ತುಳುನಾಡಿನ - ಇತಿಹಾಸ ಮತ್ತು ಡಾ। ರಮೇಶ ಎಂ. ಜೆ. ಶರ್ಮ ಅವರು ಜೊತೆಯಾಗಿ ರಚಿಸಿರುವ ತುಳುನಾಡಿನ ಅರಸು ಮನೆತನಗಳು ಕೂಡ ಗಮನಿಸಬೇಕಾದ ಕೃತಿಗಳಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಇತರ ಸಂಘ ಸಂಸ್ಥೆಗಳು ಹೊರತಂದಿರುವ ಸ್ಮರಣ ಸಂಚಿಕೆಗಳಲ್ಲಿ ತುಳುನಾಡಿನ ಜೈನಧರ್ಮ ಮತ್ತು ಸಂಸ್ಕೃತಿಯ ಕುರಿತು ಕೆಲವು ಬಿಡಿಬಿಡಿಯಾದ ಲೇಖನಗಳು ಕಂಡು ಬರುತ್ತವೆ. ಪಂಚಕಜ್ಜಾಯ (ಕ.ಸಾ.ಪ. ೧೯೨೭- ಮಂಗಳೂರು) ದಲ್ಲಿ ಎಂ.ಜಿ. ಐತಾಳ್‌ರ ತುಳುನಾಡಿನ ಪ್ರಾಚೀನ ಕವಿಗಳು; ಪಂಜೆಮಂಗೇಶರಾಯರು ಬರೆದಿರುವ ಮೂಡಬಿದಿರೆಯ ಹೊಸ ಬಸದಿಯ ಶಿಲಾಶಾಸನಗಳು; ಗೋವಿಂದ ಪೈ ಅವರು ಬರೆದ ಇತಿಹಾಸದ ಇರುಳಲ್ಲಿ ತುಳುನಾಡು ಲೇಖನಗಳಿವೆ. ತೆಂಕನಾಡು (ಕ.ಸಾ.ಪ. ೧೯೪೭ - ಕಾಸರಗೋಡು) ಸ್ಮರಣಸಂಚಿಕೆಯಲ್ಲಿ ಗೋವಿಂದ ಪೈಗಳು ಬರೆದ ತುಳುನಾಡು ಸಾಲೆತ್ತೂರು ಬರೆದ ಅಳಿಯ ಸಂತಾನಕಟ್ಟು; ಶ್ರೀಪಾದ ಶರ್ಮರು ಬರೆದಿರುವ ದಕ್ಷಿಣಕನ್ನಡದಲ್ಲಿ ಜೈನಧರ್ಮದ ಕುರುಹುಗಳು - ಮುಂತಾದ ಲೇಖನಗಳಿವೆ. ದಿಬ್ಬಣ (ದ. ಕ. ಜಿ. ಸಾ. ಸ. ೧೯೭೧, ಕಾರ್ಕಳ) ದಲ್ಲಿ ಗುರುರಾಜ ಭಟ್ಟರು ಬರೆದ ಕಾರ್ಕಳ ಮೂಡಬಿದಿರೆಯ ಐತಿಹಾಸಿಕ ಹಿನ್ನೆಲೆ ಲೇಖನವು ಉಪಯುಕ್ತ ವಿವರಗಳನ್ನೊಳಗೊಂಡಿದೆ. ಇದೇ ರೀತಿ ನೇತ್ರಾವತಿ (ದ.ಕ.ಜಿ.ಸ. ೧೯೮೫) ಸ್ಮರಣ ಸಂಚಿಕೆಯಲ್ಲಿ ಡಾ। ಪಿ. ಎನ್. ನರಸಿಂಹ ಮೂರ್ತಿಯವರು ಬರೆದ ದಕ್ಷಿಣಕನ್ನಡದಲ್ಲಿ ಜೈನಧರ್ಮ ಹಾಗೂ ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ (ಭುವನೇಂದ್ರ ಕಾಲೇಜು ಕಾರ್ಕಳ)ದಲ್ಲಿ ಇದೇ ಲೇಖಕರು ಬರೆದಿರುವ ಇತಿಹಾಸ - ಕಲೆ ಮತ್ತು ಸಂಸ್ಕೃತಿ ಲೇಖನದಲ್ಲಿ ಜೈನ ಸಂಸ್ಕೃತಿಯ ಬಗ್ಗೆ ಚರ್ಚಿಸಿದ್ದಾರೆ.

ಜೈನ ಧರ್ಮದ ಪೂರಕ ಮಾಹಿತಿಯನ್ನು ನೀಡುವ ಪುಟ್ಟಸ್ವಾಮಿ ಡಿ. ಅವರ ಆಯ್ದ ಕುಸುಮಗಳು (೧೯೫೩), ಲಕ್ಷ್ಮೀಸೇನ ಭಟ್ಟಾರಕರ ಗೃಹಸ್ಥರ ನಿತ್ಯ ದಿನಚರಿ (೧೯೫೯), ಜೈನ ತತ್ವಸಾರ ಸಂಗ್ರಹ (೧೯೬೫), ಪದ್ಮನಾಭ ಶರ್ಮರ ಜೈನ ಸಂಸ್ಕೃತಿಯ ಪರ್ವಗಳು (೧೯೬೯) ಮೊದಲಾದ ಗ್ರಂಥಗಳು ಕರಾವಳಿಯ ಜೈನಧರ್ಮದ ಸಾಂಸ್ಕೃತಿಕ ಸ್ವರೂಪದ ವಿವಿಧ ಮುಖಗಳನ್ನು ದಾಖಲಿಸಿ ಪರಿಚಯಿಸುವಲ್ಲಿ ನಮಗೆ ನೆರವಾಗುತ್ತವೆ.

ಜೈನಧರ್ಮದಲ್ಲಿ ಭರತ ಬಾಹುಬಲಿಯ ಕಥೆ ಪ್ರಾಚೀನವಾದುದು. ಇದು ಆದಿತೀರ್ಥಂಕರ ವೃಷಭನಾಥನ ಚರಿತ್ರೆಯಲ್ಲಿ ಅಂತರ್ಗತವಾಗಿ ಬಂದಿದೆ. ಪ್ರಾಕೃತ, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ವೃಷಭನಾಥನ ಚರಿತ್ರೆಯನ್ನೊಳಗೊಂಡಿರುವ ಅನೇಕ ಗ್ರಂಥಗಳಿವೆ. ಈ ಪುರಾಣ ಕಥೆಯು ಅನೇಕ ಕವಿಗಳಿಗೆ ಆಕರ ಗ್ರಂಥವಾಗಿ ಸ್ಫೂರ್ತಿ ನೀಡಿದೆ.

ಪ್ರಾಕೃತ ಭಾಷೆಯಲ್ಲಿ ರಚನೆಗೊಂಡಿರುವ ವಿಮಲಸೂರಿಯ (ಕ್ರಿ.ಶ. ೧ನೇ ಶತಮಾನ) ಪಉಮಚರಿಯಂ, ಆದಿನಾಹಚರಿಯಂ, ವೃಷಭದೇವ ಚರಿಯಂ ಶೀಲಾಂಕಾಚಾರ್ಯನ (ಕ್ರಿ.ಶ. ೮೭೦) ಚಉಪ್ಪನ್ನಮಹಾಪುರಿಸ ಚರಿಯಂ, ವಸುದೇವ ಹಿಂಡಿಯ (ಕ್ರಿ.ಶ.ಸು. ೪ನೇ ಶತಮಾನ) ಪಉಮಚರಿಯಂ ಮುಂತಾದ ಕೃತಿಗಳಲ್ಲಿ ಬಾಹುಬಲಿಯ ಕಥೆಯು ಅಡಕವಾಗಿರುವುದನ್ನು ಗುರುತಿಸಬಹುದು. ಆದರೆ ಯಾವ ಕೃತಿಯಲ್ಲೂ ಹಿರಿಯ ಮತ್ತು ಕಿರಿಯ ಸಂಶೋಧಕರು ಗೊಮ್ಮಟ ಶಿಲ್ಪವನ್ನೇ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ನಡೆಸಿಲ್ಲ. ಗೊಮ್ಮಟ ಶಿಲ್ಪದ ಬಗ್ಗೆ ಪ್ರಾಸಂಗಿಕವಾಗಿ ವಿಚಾರಗಳು ಬರುತ್ತವೆಯೇ ಹೊರತು ಪ್ರಧಾನವಾಗಿ ಅಲ್ಲ. ಹೀಗೆ ವಿದ್ವಾಂಸರ ಅಲಕ್ಷ್ಯಕ್ಕೆ ಒಳಗಾದ ಗೊಮ್ಮಟ ಶಿಲ್ಪ, ಅದರ ಹಿನ್ನೆಲೆ, ಸ್ಥಾಪನೆ, ಪ್ರಭಾವ, ಪರಿಣಾಮಗಳು ಅಧ್ಯಯನ ಯೋಗ್ಯವೆಂದು ಭಾವಿಸಿ ಈ ವಿಷಯವನ್ನೇ ಕೇಂದ್ರ ವಸ್ತುವಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

## ಅಧ್ಯಾಯ - ಎರಡು

# ಕರಾವಳಿ ಜಿಲ್ಲೆಗಳ ಗೊಮ್ಮಟಮೂರ್ತಿಗಳು

ಪರಶುರಾಮ ಸೃಷ್ಟಿ ಎಂದು ಪ್ರಸಿದ್ಧವಾಗಿರುವ ಕರಾವಳಿ ಜಿಲ್ಲೆಗಳಾದ ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಗಳಿಗೆ ಕಾರ್ಕಳ ಮತ್ತು ಬೆಳ್ತಂಗಡಿ ಮುಖ್ಯವಾದ ತಾಲೂಕುಗಳಾಗಿವೆ. ಜಿಲ್ಲೆಗಳಲ್ಲಿ ಹೆಚ್ಚು ಮಳೆ ಬೀಳುವ ಪ್ರದೇಶಗಳಾಗಿದ್ದು, ಇಲ್ಲಿನ ಪರ್ವತ ಪ್ರದೇಶಗಳು ಅನೇಕ ನದಿಗಳಿಗೆ ಜನ್ಮ ಸ್ಥಳಗಳಾಗಿವೆ. ಶಾಂಭವಿ, ಸೀತಾ, ಸ್ವರ್ಣಾ ಇತ್ಯಾದಿ ನದಿಗಳು ಕಾರ್ಕಳ ತಾಲೂಕಿನಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿಯುತ್ತವೆ. ಹಾಗೆಯೇ ನೇತ್ರಾವತಿ, ಪಲ್ಗುಣಿ... ಇತ್ಯಾದಿ ನದಿಗಳು ಬೆಳ್ತಂಗಡಿ ತಾಲೂಕಿನಲ್ಲಿ ಹರಿಯುವ ನದಿಗಳಾಗಿವೆ. ಇಲ್ಲಿನ ಪ್ರಕೃತಿ ಅತ್ಯಂತ ರಮಣೀಯವಾಗಿದೆ. ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಭಿಮ್ಮನೆ ಬಂದಳೋ ಎಂಬ ಕವಿವಾಣಿಯನ್ನು ನೆನಪಿಗೆ ತರುವಂತಹುದು ಸಸ್ಯ ಶ್ಯಾಮಲೆ ಸೌಂದರ್ಯದ ಉತ್ತುಂಗಕ್ಕೆ ನಮ್ಮನ್ನು ಎಳೆದರೆ ಅಲ್ಲಿ ಹುಟ್ಟುವ ಜಲವಾಹಿನಿಗಳು ಮನುಕುಲದ ಜೀವನಾಡಿಗಳಾಗಿ ಇಲ್ಲಿ ಘಟಿಸಿದ ಭವ್ಯ ಇತಿಹಾಸ ಪರಂಪರೆಯತ್ತ ಮನಸೆಳೆಯುತ್ತವೆ. ಇಲ್ಲಿನ ಗುಡಿ-ಗೋಪುರಗಳು, ವಾಸ್ತು ಶಿಲ್ಪಗಳು, ಚಿತ್ರಕಲೆಗಳು, ಹಾಳಾದ ಕೋಟೆ - ಕೊತ್ತಲಗಳು, ಮೂಕ ಸಾಕ್ಷಿಯಂತಿರುವ ಕಲ್ಬರಹಗಳು ಅವಲೋಕನಾರ್ಥ ಕೈಬೀಸಿ ಕರೆಯುತ್ತಿವೆ.

## ಗೊಮ್ಮಟ ಮೂರ್ತಿಗಳು

ಗೊಮ್ಮಟೇಶ್ವರನ ಬೃಹದಾಕಾರದ ಮೂರ್ತಿ ನಿರ್ಮಾಣವು ಕರ್ನಾಟಕ ಶಿಲ್ಪಕಲೆಯ ವೈಶಿಷ್ಟ್ಯವಾಗಿದೆ. ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿರುವ ಆರು ಗೊಮ್ಮಟ ಮೂರ್ತಿಗಳಲ್ಲಿ ಮೂರು ಮೂರ್ತಿಗಳು ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇದೆ. ಇವು ಕರಾವಳಿಯ ಜೈನ ಧರ್ಮದ ಮಹತ್ವದ ಕೊಡುಗೆ. ವಿಶ್ವವಿಖ್ಯಾತ ಶ್ರವಣಬೆಳಗೊಳದ ಗೊಮ್ಮಟನ ವಿಗ್ರಹವನ್ನು ಬಿಟ್ಟರೆ, ಎತ್ತರದಲ್ಲೂ, ಸೌಂದರ್ಯದಲ್ಲೂ, ಕಾರ್ಕಳದ ಗೊಮ್ಮಟೇಶ್ವರನ ವಿಗ್ರಹಕ್ಕೆ ಎರಡನೆಯ ಸ್ಥಾನ. ಧರ್ಮಸ್ಥಳದ ಗೊಮ್ಮಟೇಶ್ವರನ ಮೂರ್ತಿಗೆ ಮೂರನೇ ಸ್ಥಾನ. ಇದರ ಕಾಲ ಇತ್ತೀಚಿನವಾಗಿದ್ದು, ಗೊಮ್ಮಟ ನಿರ್ಮಾಣ ಕಲೆಯಲ್ಲಿ ಇಂದಿಗೂ ತುಳುನಾಡಿನಲ್ಲಿ ಜೀವಂತವಾಗಿದೆಯೆನ್ನುವುದಕ್ಕೆ ಸಾಕ್ಷಿಯಾಗಿದೆ. ವೇಣೂರಿನ ಗೊಮ್ಮಟೇಶ್ವರನ ವಿಗ್ರಹಕ್ಕೆ ನಾಲ್ಕನೆ ಸ್ಥಾನವಾಗಿದೆ.

ಜೈನ ಪರಂಪರೆಯ ಪ್ರಥಮ ತೀರ್ಥಂಕರನಾದ ವೃಷಭದೇವನ ಎರಡನೆಯ ಮಗ ಬಾಹುಬಲಿಗೆ ಗೊಮ್ಮಟ ಅಥವಾ ಗೊಮ್ಮಟೇಶ್ವರನೆಂದು ಹೆಸರು. ಗೊಮ್ಮಟನೆಂದರೆ, ಚೆಲುವ, ಸುಂದರ, ಮನ್ಮಥ, ಕಾಮದೇವ ಎಂಬ ಅರ್ಥಗಳಿವೆ. ಜೈನ ಪರಂಪರೆಯಲ್ಲಿ ಬಾಹುಬಲಿಯು ಕಾಮದೇವ. ಇಂಥ ಕಾಮದೇವ ಅಥವಾ ಬಾಹುಬಲಿಯ ಆರಾಧನೆ ಕರ್ನಾಟಕದಲ್ಲಿ ಕ್ರಿ. ಶ. ೫, ೬ನೇ ಶತಮಾನದಲ್ಲಿಯೇ ರೂಢಿಯಲ್ಲಿದ್ದಂತೆ ತಿಳಿದುಬರುತ್ತದೆ.

ಡಾ। ಬಿ. ಆರ್. ಗೋಪಾಲರು, ಕದಂಬ ರವಿವರ್ಮನ (ಕ್ರಿ. ಶ. ೫-೬) ಕಾಲದ ಬನವಾಸಿಗೆ ಸೇರಿದ ಗುಡ್ಡತಟಾಕ ಗ್ರಾಮದಲ್ಲಿದ್ದ ಕಾಮಜಿನಾಲಯವು ಗೊಮ್ಮಟೇಶ್ವರನ ಆಲಯವಾಗಿತ್ತೆಂದು ನಿರ್ಧರಿಸಿದ್ದಾರೆ. ಈ ಅಂಶವನ್ನು ಇಲ್ಲಿ ಸ್ಮರಿಸಬಹುದು.[೨]

ತೀರ್ಥಂಕರರ ವಿಗ್ರಹಕ್ಕೂ, ಗೊಮ್ಮಟೇಶ್ವರನ ವಿಗ್ರಹಕ್ಕೂ ಕೆಲವು ವ್ಯತ್ಯಾಸಗಳಿವೆ. ತೀರ್ಥಂಕರರ ವಿಗ್ರಹಗಳು ಪಲ್ಯಂಕಾಸನ, ಪದ್ಮಾಸನ, ಖಡ್ಗಾಸನ ಭಂಗಿಯಲ್ಲಿದ್ದರೆ, ಗೊಮ್ಮಟೇಶ್ವರನ ವಿಗ್ರಹಗಳು ಕಾರ್ಯೋತ್ಸರ್ಗ ಭಂಗಿಯಲ್ಲಿಯೇ ಇರುತ್ತದೆ. ಪಾದದ ಬಳಿ ಹಾವು ಹರಿದಾಡುವ ಹುತ್ತದ ಜೊತೆಗೆ ಕೈಕಾಲುಗಳ ಸುತ್ತಲೂ ಮಾಧವೀ ಲತೆಗಳು ಹಬ್ಬಿರುತ್ತವೆ. ಇವು ಗೊಮ್ಮಟೇಶ್ವರನನ್ನು ಗುರುತಿಸುವಲ್ಲಿ ನಮಗೆ ನೆರವಾಗುತ್ತದೆ.[೭]

## 2.1- ಕಾರ್ಕಳದ ಗೊಮ್ಮಟ



ಕಾರ್ಕಳದ ಬೆಟ್ಟದ ಮೇಲಿರುವ ಗೊಮ್ಮಟೇಶ್ವರನ ೪೨ಅಡಿ ಎತ್ತರದ ವಿಗ್ರಹವನ್ನು ಭೈರರಸನ ಮಗನಾದ ವೀರಪಾಂಡ್ಯನು ಕ್ರಿ. ಶ. ೧೪೩೨ ಫೆಬ್ರವರಿ೧೩, ಬುಧವಾರದಂದು ಸ್ಥಾಪಿಸಿದನು. ಇದರ ಬಲಭಾಗದಲ್ಲಿ ಶಾಸನವಿದ್ದು ದೇಶಿಗಣದ ಪನಸೋಗೆ ಬಳಿಯ ಲಲಿತಕೀರ್ತಿ ಮುನಿಗಳ ಉಪದೇಶದಿಂದ ವೀರಪಾಂಡ್ಯನು ಮಾಡಿಸಿದನೆಂದು ಹೇಳಿದೆ. ಈ ವಿಗ್ರಹಕ್ಕೆ ಸಂಬಂಧಪಟ್ಟ ಪ್ರತಿಯೊಂದು ವಿವರಗಳೂ 'ಚಂದ್ರಮನ' ಗೊಮ್ಮಟೇಶ್ವರ ಚರಿತ್ರೆಯೆಂಬ ಕಾವ್ಯದಲ್ಲಿ ಉಕ್ತವಾಗಿದೆ. ಏಕಶಿಲಾ ಘಟಕದಿಂದ ಕೂಡಿದ ಈ ಶಿಲ್ಪ ನಿರ್ಮಾಣಕ್ಕೆ ಸ್ಫೂರ್ತಿ, ಶ್ರವಣಬೆಳಗೊಳದ ಗೊಮ್ಮಟೇಶ್ವರನ ಶಿಲ್ಪ; ಗಂಭೀರ ಮುಖಭಾವದ, ಶಾಂತ ಸ್ನಿಗ್ಧ ಮುಗುಳ್ನಗೆಯನ್ನು ಬೀರುವ ಸುಂದರ ಕಲಾಕೃತಿಯಿದು. ಕೇವಲ ಜ್ಞಾನದ ಆನಂದವನ್ನು ಈ ಮುಗುಳ್ನಗೆಯ ಮೂಲಕ ಗೊಮ್ಮಟನು ಹೊರಹೊಮ್ಮಿಸುತ್ತಿದ್ದಾನೆ. ಮಹಾಪುರುಷನ ಲಕ್ಷಣದಲ್ಲಿರುವ ಎಲ್ಲಾ ಅಂಶಗಳೂ ಈತನಲ್ಲಿದೆ. ಅಗಲ ಭುಜ, ವಿಶಾಲ ವಕ್ಷಸ್ಥಲ, ನೀಳ ಕೈಗಳು, ಪದ್ಮ ಚಿಹ್ನೆ, ಸಾಮಾನ್ಯ ಮನುಷ್ಯನ ಎತ್ತರವನ್ನು ಮೀರಿದ ದೇಹ ಪ್ರಮಾಣ, ಬಹುಶ್ರುತ ಜ್ಞಾನವನ್ನು ಸೂಚಿಸುವ ಇಳಿಬದ್ದ ಕಿವಿಗಳು, ಅರೆದೆರೆದ ಕಣ್ಣುಗಳು ಆತನ ಭವ್ಯ ಸೌಂದರ್ಯವನ್ನೂ ಉನ್ನತ ತ್ಯಾಗವನ್ನೂ ಎತ್ತಿ ಸಾರುತ್ತವೆ. ಅತಿತುಂಗಾಕೃತಿ, ಸೌಂದರ್ಯ, ಔನ್ನತ್ಯ - ಈ ಮೂರೂ ಗುಣಗಳು ಮೇಳೈಸಿವೆ. "ಈ ಮೂರ್ತಿ ನಿಜವಾಗಿಯೂ ಗಾತ್ರದಲ್ಲಿ ಈಜಿಪ್ತಿನ ಕೃತಿಗಳಂತಿದ್ದು, ಇದಕ್ಕೆ ಸರಿಸಮವಾದ ಕಲಾಕೃತಿಗಳು ಎಲ್ಲಿಯೂ ಇಲ್ಲವೆಂದು" ವಾಲ್‌ಹೌಸನು ಮೆಚ್ಚುಗೆಯನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[೧೦]

ಕಾರ್ಕಳದ ಗೊಮ್ಮಟೇಶ್ವರ ಚರಿತ್ರೆಯ ಕರ್ತೃ ಚದುರ ಚಂದ್ರಮನು ಕ್ರಿ. ಶ. ೧೬೪೬ ರಲ್ಲಿ ರಾಜ ನೆರವೇರಿಸಿದ

ಗೊಮ್ಮಟ ಮಹಾಮಸ್ತಕಾಭಿಷೇಕವನ್ನು ಅದ್ಭುತವಾಗಿ ವರ್ಣಿಸಿದ್ದಾನೆ. ಬಂಗರು, ಅಜಿಲರು, ಚೌಟರು, ಕೆಳದಿ ಅರಸರು, ಸಾವಿರಾರು ಮಂದಿ ಮುನಿಗಳು, ಅಸಂಖ್ಯ ಶ್ರಾವಕರು, ಶತ್ರುಗಳು, ಮಿತ್ರರು, ಎಲ್ಲರೂ ಬಂದರು. ಪೂಜಿಸಲು, ನೋಡಿ ಆನಂದಿಸಲು, ದೃಶ್ಯ, ಕಾವ್ಯ ರಚಿಸಲು ಬಂದರು. ಇಂತಹ ವೈಭವೋಪೇತವಾದ ಮಸ್ತಕಾಭಿಷೇಕಗಳು ಈ ಹಿಂದೆ ನಡೆದಿರಬಹುದು. ಆದರೆ ಅವುಗಳಲ್ಲಿ ಅಮರವಾಗಿರುವುದು ಕ್ರಿ.ಶ. 1646ರಲ್ಲಿ ನಡೆದದ್ದು ಮಾತ್ರ. ಚದುರ ಚಂದ್ರಮ ಹಾಡುಗಬ್ಬದ ಮಾಧ್ಯಮದ ಮೂಲಕ ಕೊಡುವ ದೃಶ್ಯಕಾವ್ಯ, ಮೈನವಿರೇಳಿಸುವ, ಮನರಂಜಿಸುವ, ಸತ್ವಪೂರ್ಣ ಪ್ರತ್ಯಕ್ಷದರ್ಶಿ ವಿವರಣೆಯು ನಡೆದ ಧಾರ್ಮಿಕ ಕಾರ್ಯದಷ್ಟೇ ಪವಿತ್ರವೂ, ಮಹೋನ್ನತವೂ ಆಗಿದೆ ಎಂದು ವರ್ಣಿಸಿದ್ದಾನೆ. ಅಷ್ಟೇ ಅಲ್ಲದೆ, ತನ್ನ ಕಾರ್ಕಳದ ಗೊಮ್ಮಟೇಶ್ವರ ಚರಿತೆಯಲ್ಲಿ, ಶ್ರೀಗುರು ಲಲಿತಕೀರ್ತಿ ಭಟ್ಟಾರಕ ಆಶೀರ್ವಾದದೊಡನೆ ವಜ್ರಶಿಲೆಯ ಅನ್ವೇಷಣೆಯಿಂದ ಹಿಡಿದು ವಿಗ್ರಹವನ್ನು ಬೆಟ್ಟದ ಮೇಲಕ್ಕೆ ಸಾಗಿಸುವವರೆಗಿನ ಕಥೆಯನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾನೆ. ಚಾರಿತ್ರಿಕ ದೃಷ್ಟಿಯಿಂದ ಚಂದ್ರಮನ ವಿವರಣೆಗಳು ಮಹತ್ವವನ್ನು ಪಡೆದುಕೊಳ್ಳುತ್ತವೆ. ವಿಗ್ರಹದ ಸ್ಥೂಲರೂಪ ಸಿದ್ಧವಾದ ಮೇಲೆ ಅದನ್ನು ಕಬ್ಬಿಣದ ದಪ್ಪ ಕೀಲುಗಳಿರುವ ಇಪ್ಪತ್ತು ಗಾಲಿಗಳಿಂದ ಕೂಡಿದ ಬಂಡಿಯೊಂದನ್ನು ಮಾಡಿಸಿ, ಹತ್ತುಸಾವಿರ ಸನ್ನೆಗಳಿಂದ ಮೂರ್ತಿಯನ್ನು ಬಂಡಿಗೆ ಸಾಗಿಸಿ, ಸಾವಿರಾರು ಜನ ಎಳೆದರೂ, ಅದು ಒಂದು ಮಾರು ಮಾತ್ರ ಸಾಗಿತಂತೆ. ಮೂರನೆಯ ದಿನ ಸಾವಿರ ರಾಟೆಗಳನ್ನು ಹೂಡಿಸಿ ದೇವನ ಬಂಡಿಯು ಬೆಟ್ಟವೇರುವಂತೆ ಮದ್ದಾನೆಗಳಿಂದ ನೂಕಿಸಿದಾಗ, ಆ ದಿನ ಅದು ಏಳೆಂಟು ಮಾರು ಮಾತ್ರ ಸಾಗಿತಂತೆ. ಹೀಗೆ ಒಂದು ತಿಂಗಳ ಪರ್ಯಂತ ಸಾಗಿಸಿದ ಮೇಲೆ ವಿಗ್ರಹ ಬೆಟ್ಟದ ತುದಿಯನ್ನು ತಲುಪಿತ್ತು. ಅಲ್ಲಿ ಎಪ್ಪತ್ತೆರಡು ಕಂಬಗಳ ಸೊಗಸಾದ ಚಪ್ಪರದ ಮೇಲೆ ಮೂರ್ತಿಯನ್ನು ಮಲಗಿಸಿ ವಿಗ್ರಹದ ಸೂಕ್ಷ್ಮವಾದ ಕೆಲಸವನ್ನು ಮಾಡಲಾಯಿತು. ಇದಕ್ಕೆ ಒಂದು ವರ್ಷ ಹಿಡಿಯಿತು. ಅನಂತರ ವಿಗ್ರಹದ ಪ್ರತಿಷ್ಠೆಯಾಯಿತು ಎಂದು ವಿವರಣೆಯನ್ನು ನೀಡಿದ್ದಾನೆ.[೨]

## (ಅ) ರಾಜಕೀಯ ಹಿನ್ನೆಲೆ

ತುಳುನಾಡಿನಲ್ಲಿ ಭೈರರಸರೆಂದು ಪ್ರಖ್ಯಾತರಾದವರು ಪಟ್ಟಪೊಂಬುಚ್ಚದ (ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹೊಂಬುಜ) ಜೈನ ಶಾಂತರ ವಂಶಜರಾದ ಕಳಸ - ಕಾರಕಳದ ಅರಸರು. ಘಟ್ಟದ ಕೆಳಗೆ ಕಾರ್ಕಳ, ಘಟ್ಟದ ಮೇಲೆ ಮೂಡಿಗೆರೆ, ಬಾಳೆಹೊನ್ನೂರು, ಕೊಪ್ಪ, ಶೃಂಗೇರಿ ತಾಲೂಕುಗಳನ್ನು ತನ್ನಲ್ಲಿ ಹೊಂದಿದ್ದ ವಿಶಾಲವಾದ ಈ ರಾಜ್ಯಕ್ಕೆ ಕಳಸ, ಕೆರೆವಾಸೆ ಮತ್ತು ಕಾರ್ಕಳಗಳು ರಾಜಧಾನಿಯಾಗಿದ್ದವು.

ಮೂಡಿಗೆರೆಯ ಕ್ರಿ.ಶ. ೧೨೯೯ರ ಶಾಸನದಲ್ಲಿ ಕಂಡುಬರುವ ವೀರಬಲ್ಲುದೇವ, ಮಲ್ಲುದೇವ ಮತ್ತು ಮರುದೇವ ಇವರು ಕಳಸ - ಕಾರಕಳದ ಆರಂಭದ ದೊರೆಗಳೆಂದು ಭಾವಿಸಲಾಗುತ್ತಿದೆ. ವೀರಬಲ್ಲುದೇವನನ್ನು ಆ ಶಾಸನವು "ಶ್ರೀ ಕಲಸೇಶ್ವರದೇವರ ದಿವ್ಯ ಶ್ರೀಪಾದಪದ್ಮಾರಾಧಕ ಪರಬಲ ಸಾಧಕರುಮಪ್ಪ ಮಾಂಡಲಿಕರ

ಗಂಡರ ದಾವಣಿ." ಎಂದು ಪರಿಚಯಿಸುತ್ತದೆ. ಇವನಿಗೆ ಜಾಕಲ ಮಹಾದೇವಿ, ಕಾಳಲ ಮಹಾದೇವಿಯರೆಂಬ ಇಬ್ಬರು ರಾಣಿಯರಿದ್ದು ಇವರು ಅಂದಿನ ಆಡಳಿತದಲ್ಲಿ ನೇರವಾಗಿ ಭಾಗವಹಿಸುತ್ತಿದ್ದರು. ಜಿನನನ್ನೂ ಶಿವನನ್ನೂ ಒಂದೇ ರೀತಿಯಲ್ಲಿ ಆರಾಧಿಸುತ್ತಿದ್ದ ಇವರ ದೇವಭಕ್ತಿ ವೈಶಿಷ್ಟ್ಯಪೂರ್ಣವಾದುದು. ಅನಂತರ ಕ್ರಿ.ಶ. ೧೨೮೪ ರಿಂದ ಬಾಳದೇವ ಕ್ರಿ.ಶ. ೧೨೯೭ ರಿಂದ ವೀರಪಾಂಡ್ಯರು ಆಳುತ್ತಿದ್ದ ಬಗ್ಗೆ ಆಧಾರಗಳು ದೊರೆಯುತ್ತವೆ. ಹೊಯ್ಸಳರ ಪ್ರಾಬಲ್ಯದಿಂದಾಗಿ ಮುಂದೆ ಈ ದೊರೆಗಳು ಘಟ್ಟದ ಕೆಳಗಿನ ಕಾರ್ಕಳ, ಕೆರೆವಾಸೆ ಮತ್ತು ಶಿಶಿಲ ರಾಜಧಾನಿಗಳನ್ನೇ ವಿಶೇಷವಾಗಿ ಅವಲಂಬಿಸಬೇಕಾಯಿತು.

ಕಾರಕಳದಲ್ಲಿ ಈ ಅರಸರ ಸ್ವತಂತ್ರ ಆಳಿಕೆಯನ್ನು ಸೂಚಿಸುವ ಶಾಸನವೆಂದರೆ, ಕ್ರಿ.ಶ. ೧೩೩೪ರ ಬೊಮ್ಮಿದೇವರಸನ ಮಗನಾಗಿರುವ ಲೋಕನಾಥರಸನದು. ಆತನನ್ನು "ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ರಾಜಪರಮೇಶ್ವರಂ ಉತ್ತರಮಧುರಾಧೀಶ್ವರಂ ಪಟ್ಟಪೊಂಬುಚ್ಚಪುರವರಾಧೀಶ್ವರಂ ಮಹೋಗ್ರವಂಸಲಲಾಮಂ ಪದ್ಮಾವತೀದೇವಿ ಲಬ್ಧವರ... ಶ್ರೀಮತು ಚಾರುಕೀರ್ತಿ ಪಂಡಿತದೇವರ ದಿವ್ಯ ಶ್ರೀ ಪಾದಪದ್ಮಾರಾಧಕ...ನೆಂದು ಆ ಶಾಸನವು ಶಾಂತರರ ಸಂಬಂಧವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಇವನು ಬೊಮ್ಮಿದೇವರಸನ ತರುವಾಯ ಅರಸನಾಗಿರಬೇಕು. ಅಂದರೆ ವೀರಪಾಂಡ್ಯನ ತರುವಾಯ ಈ ಬೊಮ್ಮಿದೇವನು ಪಟ್ಟಕ್ಕೆ ಬಂದಿರಬೇಕೆಂದು ಊಹಿಸಬಹುದು. ಲೋಕನಾಥರಸನು ತುಂಬ ಪ್ರಭಾವಶಾಲಿಯಾದ ರಾಜನಾಗಿದ್ದು, ಆತನ ಕಾಲದಲ್ಲಿ ಜೈನಧರ್ಮವು ಉಚ್ಛ್ರಾಯಸ್ಥಿತಿಯಲ್ಲಿತ್ತು. ಅನಂತರ ವೀರಚೆನ್ನರಸನು ಅರಸನಾಗಿದ್ದಂತೆ ಎರಡು ಶಾಸನಗಳು ಉಲ್ಲೇಖಿಸುತ್ತವೆ. ಇವನಿಗೂ ಲೋಕನಾಥ ಅರಸನಿಗೂ ಇದ್ದ ಸಂಬಂಧವು ಯಾವ ಬಗೆಯದೆಂಬುದು ಸ್ಪಷ್ಟವಿಲ್ಲ. ಒಂದು ಶಾಸನವು ಆತನನ್ನು "ಅರಿರಾಯ ಗಂಡ ದಾವಣಿ ಹುಸಿವರ ಸೂಲ ಶರಣಾಗತ ವಜ್ರಪಂಜರ ಮೊರೆಹೊಕ್ಕವರ ಕಾವ..." ಎಂದು ಆತನ ಬಹುಪರಾಕ್ರಮಿಯಾದ ಅರಸನಿರಬೇಕೆಂದು ಊಹಿಸಬಹುದು. ಇವನ ತರುವಾಯ ವೀರ ಭೈರರಸ ವೊಡೆಯನು ಆಳಿಕೆ ನಡೆಸಿದನು. ಇವನು ಚೆನ್ನರಸನ ಮಗನೋ ಅಥವಾ ಸೋದರಳಿಯನೋ ಸ್ಪಷ್ಟವಿಲ್ಲ. ಇವನು ಕೂಡ ಚೆನ್ನರಸನಂತೆ ಕೆರವಸೆಯಿಂದಲೇ ಆಡಳಿತವನ್ನು ನಡೆಸುತ್ತಿದ್ದನು. ಇವನ ಕಾಲದಲ್ಲಿ ರಾಜ್ಯವು ಶಾಂತಿ, ಸಮೃದ್ಧಿಗಳಿಂದ ಕೂಡಿತ್ತಲ್ಲದೆ ಸಾಂಸ್ಕೃತಿಕ ಕಲೆಗಳಿಗೆ ಪ್ರೋತ್ಸಾಹವೂ ದೊರೆತಿತ್ತು. ಉದಾರನೂ ಧರ್ಮಬೀರುವೂ ಆಗಿದ್ದ ಈ ಅರಸನು ಹಿರಿಯಂಗಡಿ, ಕೆರೆವಸೆ, (ಕೆರೆವಾಸೆ), ಕಳಸದ ಬಸದಿಗಳಿಗೆ ಭೂಮಿ - ಧನ ಧಾನ್ಯಗಳನ್ನು ದಾನ ಮಾಡಿದ್ದನು. ಸ್ವತಃ ಹಿರಿಯಂಗಡಿಯ ನೇಮಿನಾಥ, ಬಾರಕೂರಿನ ಪಾರ್ಶ್ವನಾಥನ ಬಸದಿಗಳನ್ನು ನಿರ್ಮಿಸಿದನು. ಕಳಸದ ಕಲಶೇಶ್ವರ, ಕೆರೆವಾಸೆಯ ಮಹಾದೇವ, ಹೆರ್ಮುಂಡೆಯ ವಿಷ್ಣುಮೂರ್ತಿ ದೇವಾಲಯಗಳಿಗೂ ದಾನ ನೀಡಿದ ಉಲ್ಲೇಖಗಳು ಕಂಡುಬರುತ್ತವೆ.[೩]

ಇಲ್ಲಿಂದ ಮುಂದೆ ಕಾರ್ಕಳವನ್ನು ಆಳಿದ ಅರಸರಲ್ಲಿ ಭೈರವ ಅಥವಾ ಭೈರರಸ; ಪಾಂಡ್ಯ ಅಥವಾ ಪಾಂಡ್ಯಪ್ಪೊಡೆಯ ಹೀಗೆ ಎರಡು ಹೆಸರುಗಳನ್ನು ವಿಶೇಷವಾಗಿ ಕಾಣುತ್ತೇವೆ. ಇವು ಅವರ ಹುಟ್ಟಿನ

ಹೆಸರುಗಳೆನ್ನುವುದಕ್ಕಿಂತ ಪಟ್ಟದ ಕಾಲದಲ್ಲಿ ಧರಿಸಿದ ಹೆಸರುಗಳಾಗಿರಬೇಕೆಂದು ಕೆಲವರು ಭಾವಿಸುತ್ತಾರೆ. ಬಹುಶಃ ಅಳಿಯ ಸಂತಾನದ ಪ್ರಭಾವವಿದ್ದರೂ ಇರಬಹುದು.

ವೀರಭೈರವನ ತರುವಾಯ (ಕ್ರಿ.ಶ. ೧೩೯೦-೧೪೨೦) ಆತನ ಮಕ್ಕಳಾದ ಪಾಂಡ್ಯ ಮತ್ತು ರಾಮನಾಥ ಎಂಬಿಬ್ಬರು ಕೆರವಾಸೆಯಿಂದ ಆಳ್ವಿಕೆ ನಡೆಸಿದರು. ರಾಮನಾಥನು ಸಾತ್ವಿಕ ಸ್ವಭಾವದನು. ಇವನು ನಿರ್ಮಿಸಿದ ವಿಶಾಲವಾದ ಸರೋವರವು ರಾಮಸಮುದ್ರವೆಂಬ ಹೆಸರಿನಲ್ಲಿ ಈಗಲೂ ಉಳಿದುಬಂದಿದೆ.[೪] ತಂದೆ ಜೀವಿಸಿರುವಾಗಲೇ ಇವನು ಮರಣಹೊಂದಿದನು. ತಂದೆಯ ತರವಾಯ ಇನ್ನೊಬ್ಬ ಮಗನಾದ ಪಾಂಡ್ಯನು (ಕ್ರಿ.ಶ. ೧೪೨೦-೧೪೫೪) ಪಟ್ಟಕ್ಕೆ ಬಂದನು. ಇವನನ್ನು ಮೂರನೆಯ ಪಾಂಡ್ಯ, ಅಭಿನವ ಚಾಮುಂಡರಾಯ, ವೀರಪಾಂಡ್ಯ ಮುಂತಾದ ಹೆಸರುಗಳಿಂದ ಗುರುತಿಸಲಾಗುತ್ತಿದೆ. ತಂದೆಯಂತೆ ಮುತ್ಸದ್ಧಿಯೂ, ಧರ್ಮಭೀರುವೂ, ಉದಾತ್ತಗುಣಗಳಿಗೆ ಆಶ್ರಯದಾತನೂ ಆಗಿದ್ದ ಇವನ ಆಸ್ಥಾನದಲ್ಲಿ ಕವಿ, ಗಮಕಿವಾದಿ, ವಾಗ್ಮಿ, ಪಂಡಿತರಿಗೆ ಗೌರವವಾದ ಸ್ಥಾನಗಳಿದ್ದವು. ಸ್ವತಃ ಕವಿಯಾದ ಇವನು ಸಂಸ್ಕೃತದಲ್ಲಿ ಭವ್ಯಾನಂದ ಕಾರಕವೆಂಬ ಕಾವ್ಯವನ್ನು ರಚಿಸಿದ್ದನು. ಇವನ ಕಾಲದಲ್ಲಿ ಕಲ್ಯಾಣಕೀರ್ತಿಯು ನೆಲ್ಲಿಕಾರು, ಕಾರ್ಕಳದಲ್ಲಿ ವಾಸವಾಗಿದ್ದು, ಅತ್ಯುತ್ತಮವಾದ ಅನೇಕ ಗ್ರಂಥಗಳನ್ನು ರಚಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕ್ರಿ.ಶ. ೧೪೩೨ರಲ್ಲಿ ಕಾರ್ಕಳದ ಗೊಮ್ಮಟೇಶ್ವರನ ವಿಗ್ರಹವನ್ನು ನಿಲ್ಲಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಕ್ರಿ.ಶ. ೧೪೩೬ರಲ್ಲಿ ಗೊಮ್ಮಟದೇವನ ಎದುರಿನ ಬ್ರಹ್ಮದೇವಸ್ತಂಭವನ್ನೂ ನಿರ್ಮಿಸಿದನು. ಕ್ರಿ.ಶ. ೧೪೩೬ರಲ್ಲಿ ಪಂಚಗ್ರಹಯೋಗವು ಕೂಡಿಬಂದಾಗ, ದೋಷ ನಿವಾರಣೆಗಾಗಿ ಕಾರ್ಕಳದ ವಿನಾಯಕ ಬೆಟ್ಟದ ವಿನಾಯಕನಿಗೂ ಕಳಸದ ಕಳಸೇಶ್ವರ ದೇವರ ಸನ್ನಿಧಿಯಲ್ಲೂ ದಾನ-ಧರ್ಮಕಾರ್ಯಗಳನ್ನು ಕೈಗೊಂಡಿದ್ದನು. ಇದಕ್ಕೆ ಸಾಕ್ಷಿಗಳಾಗಿ ಅನೇಕ ಅಧಿಕಾರಿಗಳು, ನಾಡಪ್ರಭುಗಳು, ಶೃಂಗೇರಿ ಮಠದ ಪ್ರತಿನಿಧಿಗಳು ಇದ್ದರೆಂಬುದನ್ನು ಕೆಲವು ದಾಖಲೆಗಳು ಸ್ಪಷ್ಟಪಡಿಸುತ್ತವೆ. ಅಭಿನವಪಾಂಡ್ಯದೇವನು (ಕ್ರಿ.ಶ. ೧೪೫೫-೧೪೭೫) ಅನಂತರ ಪಟ್ಟಕ್ಕೆ ಬಂದು, ಸುಮಾರು ೨೦ ವರ್ಷಗಳವರೆಗೆ ಆಳ್ವಿಕೆ ನಡೆಸಿದನು. ಇವನು ಭೈರರಸನ ಮಗಳು ಹಾಗೂ ವೀರಪಾಂಡ್ಯನ ಸೋದರಿ ಬಲಮಾದೇವಿಯ ಮಗನಿರಬೇಕೆಂದು ನಿರ್ಧರಿಸಲಾಗಿದೆ. ಇವನ ಕಾಲದಲ್ಲಿ ನಡೆದ ಮಹತ್ವದ ಘಟನೆಯೆಂದರೆ; ಹಿರಿಯಂಗಡಿಯ ನೇಮೀಶ್ವರ ಬಸದಿಯ ಎದುರಿನಲ್ಲಿ ಮಹೋನ್ನತವಾದ ಮಾನಸ್ತಂಭದ ಸ್ಥಾಪನೆ. ಜೈನ ಶಿಲ್ಪಕಲೆಯಲ್ಲಿ ಗೊಮ್ಮಟ ಕೆತ್ತನೆಯಂತೆ, ಮಾನಸ್ತಂಭದ ಕೆತ್ತನೆಗೂ ಅಷ್ಟೇ ಮಹತ್ವವಿದೆ. ಇದು ಅಮೂಲ್ಯವಾದ ಕೊಡುಗೆಯಾಗಿದೆ. ಇವನು ಕೈಗೊಂಡ ಇನ್ನೊಂದು ಕೆಲಸವೆಂದರೆ, ಬಂಗ ಕಾಮಿರಾಜನೊಡನೆ ಮಾಡಿಕೊಂಡ ರಾಜಕೀಯ ಒಪ್ಪಂದ. ಕ್ರಿ.ಶ. ೧೪೬೧ರಲ್ಲಿ ನಡೆದ ಈ ಮಹತ್ವದ ಒಪ್ಪಂದದಲ್ಲಿ, ಚೌಟರ ಜೊತೆಗೆ ಯಾರೂ ಸಂಧಾನ ನಡೆಸಿ ಒಪ್ಪಂದ ಮಾಡಿಕೊಳ್ಳಬಾರದೆಂಬ ಸೂಚನೆಯನ್ನು ಕಾಣುತ್ತೇವೆ. ತರುವಾಯ ವೀರ ಭೈರವನು ಸ್ವಲ್ಪ ಕಾಲ ಅರಸನಾಗಿದ್ದಂತೆ (ಕ್ರಿ.ಶ. ೧೪೬೮-೧೫೦೧) ತಿಳಿದುಬರುತ್ತದೆ. ಇದೇ ಕಾಲದಲ್ಲಿ ಪಾಂಡ್ಯ ರಾಜನು (ಕ್ರಿ.ಶ. ೧೪೮೫-೧೪೮೪) ಯಲ್ಲೂರಿನ ಕುಂದ ಹೆಗ್ಗಡೆ ಮತ್ತು ಕಾಪು ಮುದ್ದ ಹೆಗ್ಗಡೆಯ ಜೊತೆಯಲ್ಲಿ ರಾಜಕೀಯ

ಒಪ್ಪಂದದಲ್ಲಿ ಭಾಗವಹಿಸಿರುವುದನ್ನು ನೋಡಿದರೆ, ವೀರಭೈರವ ಮತ್ತು ಪಾಂಡ್ಯ ರಾಜ ಇಬ್ಬರೂ ಜೊತೆ ಜೊತೆಯಾಗಿಯೇ ಆಳಿಕೆ ನಡೆಸುತ್ತಿದ್ದರೆಂದು ಹೇಳಬಹುದು.[೩]

ಅನಂತರ ಸಿಂಹಾಸನವನ್ನೇರಿದ ೪ನೆಯ ಭೈರವ ಅಥವಾ ಇಮ್ಮಡಿ ಭೈರರಸ ವೊಡೆಯನು ದೀರ್ಘಕಾಲ ಆಡಳಿತವನ್ನು (ಕ್ರಿ.ಶ. ೧೫೦೧-೧೫೪೦) ನಡೆಸಿದನು. ಇವನು ಬೊಮ್ಮಲದೇವಿಯ ಮಗನೂ ಹಿರಿಯ ಭೈರರಸನ ಅಳಿಯನೂ ಅಗಿದ್ದನೆಂದು ಒಂದೆರಡು ಶಾಸನಗಳು ನಿರೂಪಿಸುತ್ತವೆ. ಮೂಡಿಗೆರೆಯ ಕ್ರಿ. ಶ. ೧೫೧೬ರ ಒಂದು ದಾಖಲೆಯಲ್ಲಿ ಸ್ವಾರಸ್ಯಕರವಾದ ಘಟನೆಯೊಂದು ನಿರೂಪಿತವಾಗಿದೆ. ವಿಜಯನಗರ ಚಕ್ರವರ್ತಿಯು, ಸೈನ್ಯ ಸಮೇತ ಬಂದು ಮಂಗಳೂರಿನಲ್ಲಿ ನಿಂತಾಗ, ಈ ಭೈರರಸವೊಡೆಯನು ವಿಜಯನಗರದ ದಂಡು ವಾಪಾಸು ಹೋದರೆ ತಾನು ಕಳಸನಾಥೇಶ್ವರನ ಶಿಥಿಲವಾದ ದೇವಾಲಯವನ್ನು ಜೀರ್ಣೋದ್ಧಾರ ಮಾಡುವುದಾಗಿ ಪ್ರಾರ್ಥಿಸಿಕೊಳ್ಳುತ್ತಾನೆ. ಇವನ ಪ್ರಾರ್ಥನೆಯು ನೆರವೇರಿ, ವಿಜಯನಗರ ಸೈನ್ಯವು ತಿರುಗಿ ಹೋಗುತ್ತವೆ. ತನ್ನ ರಾಜ್ಯದಲ್ಲಿ ಶಾಂತಿ ಸ್ಥಾಪನೆಯಾದಾಗ ತನ್ನ ಮಂತ್ರಿಯನ್ನು ಕಳುಹಿಸಿ ಜೀರ್ಣೋದ್ಧಾರ ಕಾರ್ಯವನ್ನು ನಡೆಸುತ್ತಾನೆ. ವರಾಂಗದ ಒಂದು ದಾಖಲೆಯಲ್ಲಿ ಅಲ್ಲಿಯ ಚೈತ್ಯಾಲಯದ ಆದಿನಾಥ ಸ್ವಾಮಿಗೆ ಪೂಜಾ ಕಾರ್ಯಕ್ಕಾಗಿ, ಒಂದು ಹಳ್ಳಿಗೆ ಭೈರವಪುರವೆಂದು ಹೆಸರಿಟ್ಟು ದಾನ ಮಾಡಿದಂತೆ ಹೇಳಲಾಗಿದೆ.[೪] ಇವನ ತರುವಾಯ ವೀರಪಾಂಡ್ಯಪ್ಪೊಡೆಯ ಅಥವಾ ಆರನೆಯ ಪಾಂಡ್ಯನು ಸಿಂಹಾಸನವನ್ನೇರಿದನು. ಇವನು ಚಂದಲದೇವಿಯ ಮಗನೂ ಭೈರರಸನ ಅಳಿಯನೂ ಆಗಿದ್ದನು. ಒಂದು ಶಾಸನದಲ್ಲಿ ಇವನನ್ನು ಚಂದ್ರವಂಶದವನೆಂದು ಕರೆಯಲಾಗಿದೆ. ಕೆರೆಬಸದಿಯ ಶಾಸನವು ಇವನನ್ನು ಅರಿರಾಯಗಂಡರದಾವಣಿಯೆಂದು ಸ್ತುತಿಸುತ್ತದೆ. ಅಲ್ಲದೇ ಪಾಂಡ್ಯನಗರಿಯಲ್ಲಿ ಸುಂದರವಾದ ಚತುರ್ಮುಖ ಬಸದಿಯೊಂದನ್ನು ಸ್ಥಾಪಿಸಿದಂತೆ ವಿವರಿಸಲಾಗಿದೆ. ಆಗಾಗ ಗಡಿಭಾಗದಲ್ಲಿ ಸಂಭವಿಸುತ್ತಿದ್ದ ಯುದ್ಧವನ್ನು ನಿಲ್ಲಿಸಲು, ಚೌಟರಾಜ ತಿರುವಲರಸನೊಂದಿಗೆ ಶಾಂತಿ ಒಪ್ಪಂದವನ್ನು ಮಾಡಿಕೊಂಡಿದ್ದನಲ್ಲದೇ ಕೆರೆವಾಸೆಯ ಮಹಾದೇವ, ಪೆರ್ವಾಜೆಯ ಮಹಾದೇವ, ಮಾಳದ ವಿಷ್ಣುಮೂರ್ತಿ ದೇವಾಲಯಗಳಿಗೂ ವಿಪುಲವಾಗಿ ದಾನವನ್ನು ಮಾಡಿದ್ದನು.[೩]

ಇವನ ಅನಂತರ ವೀರ ಇಮ್ಮಡಿ ಪಾಂಡ್ಯಪ್ಪೊಡೆಯ (೭ನೆಯ ಪಾಂಡ್ಯ), ಭೈರರಸವೊಡೆಯ (೫ನೆಯ ಭೈರವ) ಇಮ್ಮಡಿ ಭೈರವ (೬ನೆಯ ಭೈರವ) ಪಾಂಡ್ಯಪ್ಪವೊಡೆಯ (೮ನೆಯ ಪಾಂಡ್ಯ) ಮತ್ತು ಭೈರರಸ (೭ನೆಯ ಭೈರವ) ಮುಂತಾಗಿ ಸುಮಾರು ೫ ಜನ ಅರಸರು ಅಲ್ಪ ಸ್ವಲ್ಪ ಕಾಲದವರೆಗೆ ಆಳಿಕೆ ನಡೆಸಿದರು. ಕ್ರಿ.ಶ. ೧೫೭೩ ಆಡಳಿತ ನಡೆಸಿದ ಇಮ್ಮಡಿ ಭೈರವನು ಪ್ರಖ್ಯಾತನಾದ ಅರಸನಾಗಿದ್ದನು. ಪಾಂಡ್ಯ ನಗರಿಯಲ್ಲಿ ಗೊಮ್ಮಟಬೆಟ್ಟಕ್ಕೆ ಇದಿರಾಗಿ ಕ್ರಿ.ಶ. ೧೫೮೬ರಲ್ಲಿ ಅತ್ಯಂತ ಸುಂದರವಾದ ಚತುರ್ಮುಖ ಬಸದಿಯೊಂದನ್ನು ಕಟ್ಟಿಸಿದನು. ಶಾಸನವೊಂದರಲ್ಲಿ ಈ ಬಸದಿಯನ್ನು 'ಶ್ರೀ ರತ್ನತ್ರಯಭದ್ರದಾಮ' ಸರ್ವತೋಭದ್ರ ತ್ರಿಭುವನತಿಲಕ ಚೈತ್ಯಾಲಯವೆಂದು ಸ್ತುತಿಸಲಾಗಿದೆ. ಇದರ ತ್ರಿಕಾಲ ಪೂಜೆಗೆ ರೆಂಜಾಳ, ನಲ್ಲೂರುಗಳ ೭೦೦ ಮುಡಿ ಉತ್ಪತ್ತಿ ಬರುವ ಭೂಮಿಯನ್ನೂ

ಅನೇಕ ಹೊನ್ನನ್ನೂ ಧಾರೆಯೆರೆದಿದ್ದನು. ಜೊತೆಗೆ ಅರಮನೆ ಬಸದಿಯ ಚಂದ್ರನಾಥ ಸ್ವಾಮಿ, ಗೋವರ್ಧನಗಿರಿಯ ಪಾರ್ಶ್ವನಾಥನಿಗೂ ದಾನ ನೀಡಿದ್ದನು. ಕೊಪ್ಪದಲ್ಲಿ ಕ್ರಿ.ಶ. ೧೫೯೮ರಲ್ಲಿ 'ಸಾಧನ ಚೈತ್ಯಾಲಯವನ್ನೂ; ಕ್ರಿ.ಶ. ೧೫೮೮ರಲ್ಲಿ ನಾರ್ವೆಯಲ್ಲಿ ಗೋಪಾಲಕೃಷ್ಣ ದೇವಾಲಯ, ಅನ್ನಸತ್ರವನ್ನೂ ನಿರ್ಮಾಣ ಮಾಡಿದ ಕೀರ್ತಿ ಇವನದು. ಕ್ರಿ.ಶ. ೧೫೭೯ರಲ್ಲಿ ಕಾರ್ಕಳದ ಜೈನ ಸಮಾಜಕ್ಕೆ ಸೇರಿದ ೫೦೦೦ ಹಲರು, ಶಾಸ್ತ್ರದಾನಕ್ಕೆ ೫೦೦ ಗದ್ಯಾಣಗಳನ್ನು ಲಲಿತಕೀರ್ತಿ ಭಟ್ಟಾರಕರ ಶಿಷ್ಯರಾದ ಶಾಂತಕೀರ್ತಿ ಮುನಿಗಳ ವಶಕ್ಕೆ ಕೊಟ್ಟು, ಬರುವ ಬಡ್ಡಿಯಿಂದ ವಿದ್ಯಾಭ್ಯಾಸಕ್ಕಾಗಿ ಶಾಲೆಯೊಂದನ್ನು ನಡೆಸುವಂತೆ ವ್ಯವಸ್ಥೆಗೊಳಿಸಿರುವುದು ಇವನ ವಿದ್ಯಾಪ್ರೇಮಕ್ಕೆ ನಿದರ್ಶನವಾಗಿದೆ. ಕಾರ್ಕಳದಲ್ಲಿ ತಾನು ನಿರ್ಮಿಸುತ್ತಿದ್ದ ಬಸದಿಯೊಂದನ್ನು ಗೌಡ ಸಾರಸ್ವತರಿಗೆ ನೀಡಿ ಅದರಲ್ಲಿ ಅನಂತಶಯನ ವಿಗ್ರಹವನ್ನು ಸ್ಥಾಪನೆಮಾಡಿರುವುದು ಪರಧರ್ಮ ಸಹಿಷ್ಣುತೆಗೆ ಸಾಕ್ಷಿಯಾಗಿದೆ. ಹೀಗೆ ಕಾರ್ಕಳದ ಭೈರರಸ ಪರಂಪರೆಯಲ್ಲಿಯೇ ಇವನಿಗೆ ಗೌರವಯುತವಾದ ಸ್ಥಾನವಿದೆ. ಇವನ ತರುವಾಯ ಪಾಂಡ್ಯಪ್ಪೊಡೆಯನು ಪಟ್ಟಕ್ಕೆ ಬಂದನು. ಚದುರ ಚಂದ್ರಮನು ಕಾರ್ಕಳ ಗೊಮ್ಮಟೇಶ್ವರ ಚರಿತ್ರೆಯಲ್ಲಿ ನಿರೂಪಿಸಿರುವಂತೆ, ಇಮ್ಮಡಿ ಭೈರನ ರಾಣಿ ಮಲ್ಲಿದೇವಿಗೆ ಪಾಂಡ್ಯ, ಚಂದ್ರಶೇಖರ, ಇಮ್ಮಡಿ ಭೈರವ ಹೆಸರಿನ ಮೂವರು ಗಂಡು ಮಕ್ಕಳು, ಇವರಲ್ಲಿ ಚಂದ್ರಶೇಖರನು ಅಕಾಲಮರಣಕ್ಕೆ ತುತ್ತಾದನು. ಉಳಿದ ಸೋದರರಿಬ್ಬರೂ, ಸಹೋದರನ ಸ್ಮರಣಾರ್ಥವಾಗಿ ಶಿಲಾಮಯವಾದ ಬಸದಿಯೊಂದನ್ನು ಕ್ರಿ.ಶ.೧೬೦೪ರಲ್ಲಿ ನಿರ್ಮಿಸಿದರಂತೆ. ಈ ಬಸದಿ ಶ್ರವಣ ಬಸದಿ ಹೆಸರಿನಲ್ಲಿ ಈಗಲೂ ಇದೆ. ಇವರಿಬ್ಬರೂ ಮುಂದೆ ಕ್ರಮವಾಗಿ ಪಟ್ಟಕ್ಕೆ ಬಂದರು. ಅಭಿನವ ಭೈರವನ ಕಾಲದಲ್ಲಿ ನಡೆದ ಗೊಮ್ಮಟೇಶ್ವರನ ವೈಭವದ ಮಹಾಮಸ್ತಕಾಭಿಷೇಕದ ವರ್ಣನೆಯನ್ನು ಆಸ್ಥಾನಕವಿಯಾದ ಚದುರ ಚಂದ್ರಮನು ನಮಗೆ ನೀಡಿದ್ದಾನೆ. ಕ್ರಿ.ಶ. ೧೬೪೬ರಲ್ಲಿ ನಡೆದ ಈ ಉತ್ಸವದಲ್ಲಿ ಬಂಗರು, ಅಜಿಲರು, ಚೌಟರು, ಕೆಳದಿ ಅರಸರು ಸಾವಿರಾರು ಜನ ಅಧಿಕಾರಿಗಳು, ಮುನಿವೃಂದದವರು ಭಾಗವಹಿಸಿದ್ದರೆಂದು, ಪ್ರತ್ಯಕ್ಷದರ್ಶಿಯಾಗಿ ಆತನು ಹೇಳುತ್ತಾನೆ. ಇಂಥ ಧಾರ್ಮಿಕ ಕಾರ್ಯದಲ್ಲಿ ತುಳುನಾಡಿನ ಎಲ್ಲಾ ಅರಸರೂ ತಮ್ಮಲ್ಲಿದ್ದ ವೈಮನಸ್ಸನ್ನು ಮರೆತು ಒಟ್ಟು ಸೇರುತ್ತಿದ್ದ ವಿಚಾರ ಇಲ್ಲಿಯ ಸಂಸ್ಕೃತಿಯ ಉನ್ನತ ಮೌಲ್ಯವನ್ನು ಎತ್ತಿ ತೋರಿಸುತ್ತದೆ.[೩]

ಇಲ್ಲಿಂದ ಮುಂದೆ ಕೆಳದಿ ಅರಸರು ಪ್ರಭಾವಕ್ಕೆ ಬರುತ್ತಿರುವಂತೆ ಭೈರರಸರು, ಕ್ರಮವಾಗಿ ತಮ್ಮ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತ ಬಂದರು. ಕೆಳದಿಯ ದೊಡ್ಡ ಸಂಕಣ್ಣ ನಾಯಕನು, ೫ನೆಯ ಭೈರವನನ್ನು ಯುದ್ಧದಲ್ಲಿ ಸೋಲಿಸಿದರೆ, ವೆಂಕಟಪ್ಪ ನಾಯಕನು (ಕ್ರಿ.ಶ. ೧೫೮೬-೧೬೨೯) ಭೈರರಸನಿಂದ ಕೊಪ್ಪ, ಬೆಳ್ಳರೆ ಮೊದಲಾದ ಭಾಗಗಳನ್ನು ಕಿತ್ತುಕೊಂಡನು. ಮುಂದೆ ಇದೇ ವೆಂಕಟಪ್ಪ ನಾಯಕನು, ತನ್ನ ರಾಜ್ಯವನ್ನು ವಿಸ್ತರಿಸುತ್ತ, ೭ನೆಯ ಭೈರವನಿಂದ ಕಪ್ಪವನ್ನು ಪಡೆದುಕೊಂಡನೆಂದು ಕೆಳದಿ ನೃಪ ವಿಜಯದಲ್ಲಿ ವರ್ಣಿಸಲಾಗಿದೆ. ಹಾಗೂ ಹೀಗೂ ಜೀವ ಹಿಡಿದುಕೊಂಡಿದ್ದ ಭೈರವ ಅರಸನು ಶೃಂಗೇರಿಯನ್ನು ಪುನಃ ಪಡೆದನೆಂದು ಗುರುವಂಶ ಕಾವ್ಯದಲ್ಲಿ ಉಕ್ತವಾಗಿದ್ದರೂ ಮುಂದೆ ಕ್ರಿ.ಶ. ೧೭೬೩ರ ಹೈದರ ಆಲಿಯ ದಾಳಿಯೊಡನೆ ಭೈರವ ಅರಸರ ಆಳ್ವಿಕೆಯೂ ಕೊನೆಗೊಂಡಿತೆಂದು ಹೇಳಬಹುದು.[೩]

## ಕಾರ್ಕಳ ಕೆಳದಿ ಸಂಬಂಧ

ವಿಜಯನಗರ ಪತನಾನಂತರ ಕರ್ನಾಟಕದ ರಾಜಕೀಯ ಪರಿಸ್ಥಿತಿ ಬದಲಾಯಿತು. ಕರಾವಳಿ ಕರ್ನಾಟಕದ ಮೇಲೆ ಇದರ ಪರಿಣಾಮ ಬಹಳ. ಕೆಳದಿಯ ನಾಯಕರು ಈ ಭಾಗದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಬಿರುಗಾಳಿಯಂತೆ ಬಂದ ಇವರು ನೀಲೇಶ್ವರದವರೆಗೆ ಸಾಮ್ರಾಜ್ಯ ಕಟ್ಟಿದರು. ಇಲ್ಲಿನ ಸಣ್ಣಪುಟ್ಟ ರಾಜಮನೆತನಗಳೆಲ್ಲವೂ ತಲೆಕೆಳಗಾದವು. ಸುಮಾರು ಒಂದು ಶತಮಾನದವರೆಗೆ ಕೆಳದಿಯ ರಭಸದ ಅಲೆಗಳಿಗೆ ಕಾರ್ಕಳದ ಅರಸರು ಹೆಬ್ಬಂಡೆಗಳಾಗೆ ಉಳಿದರು.[೩]

ಕೆಳದಿ ಅರಸು ದೊಡ್ಡ ಸಂಕಣ್ಣ ನಾಯಕ ೫ನೆಯ ಭೈರರಸುವನ್ನು ಯುದ್ಧದಲ್ಲಿ ಸೋಲಿಸಿದನು. ಅವನಿಂದ ಕಪ್ಪಕಾಣಿಕೆ ಪಡೆದುಕೊಂಡ. ಮುಂದೆ ವೆಂಕಟಪ್ಪ ನಾಯಕನು (೧೫೮೬-೧೬೨೯) ಭೈರರಸುವಿನಿಂದ ಕೊಪ್ಪ ಮತ್ತು ಬೆಳ್ಳರೆ ಭಾಗಗಳನ್ನು ಪಡೆಯುವಲ್ಲಿ ಸಫಲನಾದನು. ಕಾರ್ಕಳದ ಅರಸು ಶೃಂಗೇರಿಯನ್ನು ಮತ್ತೆ ಪಡೆಯಲು ಪ್ರಯತ್ನಿಸಿ ವಿಫಲನಾದ. ಆದರೆ ವಿಸ್ತಾರವಾದ ರಾಜ್ಯಹೊಂದಿದ್ದ ಇವನಿಗೆ ಆದ ನಷ್ಟ ಸ್ವಲ್ಪ ಮಾತ್ರ. ಮುಂದೆ ವೆಂಕಟಪ್ಪ ನಾಯಕ (೧೬೨೯-೧೬೪೫)ನು ಯುದ್ಧ ಮುಂದುವರೆಸಿ ೭ನೆಯ ಭೈರವನಿಂದ ಕಪ್ಪ ಪಡೆಯುವಲ್ಲಿಗೆ ತೃಪ್ತಿಪಟ್ಟುಕೊಂಡ. ಶ್ರೀ ಲಕ್ಷ್ಮಣ ಶಾಸ್ತ್ರಿಗಳು ಬರೆದ ಗುರುವಂಶ ಕಾವ್ಯದಲ್ಲಿ ಭೈರರಸು ಪಡೆದ ವಿಜಯದ ಸವಿಸ್ತಾರ ವರ್ಣನೆ ಇದೆ. ಈ ಯುದ್ಧಗಳು ಪ್ರಾಯಶಃ ೧೬೩೯-೧೬೪೦ರಲ್ಲಿ ನಡೆದವು. ಕೆಳದಿ ನೃಪ ವಿಜಯವು ಈ ಬಗ್ಗೆ ವಿವರವಾದ ಮಾಹಿತಿ ಕೊಡುತ್ತದೆ. ಇಷ್ಟಕ್ಕೆ ಯುದ್ಧ ನಿಲ್ಲಲಿಲ್ಲ. ಪ್ರಾಯಶಃ ಗೊಮ್ಮಟನ ಮಹಾಮಸ್ತಕಾಭಿಷೇಕ ನಡೆಸಿದ ನಂತರ, ಭೈರರಸುವೊಡೆಯನು ಕೆಳದಿ ಸೈನ್ಯದೊಂದಿಗೆ ಕಾದಾಡಿ ಗೆಲುವು ಪಡೆದ. ಶೃಂಗೇರಿಯನ್ನು ಮತ್ತೆ ತನ್ನ ಸ್ವಾಧೀನಪಡಿಸಿಕೊಂಡ, ಎಂಬ ವರ್ಣನೆ ಇದೆ.

ಈ ಮೇಲಿನ ವಿಚಾರ ಕಳಸ-ಕಾರ್ಕಳ ರಾಜ್ಯವು ಕೆಳದಿ ಅರಸರಿಂದ ಸಂಪೂರ್ಣ ನಾಶ ಹೊಂದಲಿಲ್ಲ ಎಂಬುದನ್ನು ಶ್ರುತಪಡಿಸುತ್ತದೆ. ಆದರೆ ಅಭಿನವ ಭೈರರಸವೊಡೆಯನ (೧೬೬೦) ಅನಂತರ ಯಾರು ಆಳ್ವಿಕೆ ನಡೆಸಿದರು ಎಂಬುದು ಗೊತ್ತಾಗುವುದಿಲ್ಲ. ಆದರೆ ಈ ರಾಜ್ಯ ಮುಂದೆ ಒಂದು ಶತಮಾನ ಕಾಲ ಆಳ್ವಿಕೆ ನಡೆಸಿತ್ತು ಎಂಬುದು ಜಾನಪದ ಐತಿಹ್ಯದಿಂದ ತಿಳಿದುಬರುತ್ತದೆ. ಪಾಡ್ದನವೊಂದರ ಪ್ರಕಾರ ಇಲ್ಲಿನ ಕೊನೆಯ ರಾಜ ಪಾಂಡ್ಯರಾಯ. ಈತನನ್ನು ಮೈಸೂರಿನ ತುರುಷ್ಕ ಪಡೆ ಸೋಲಿಸಿಕೊಂದಿತು. ಈ ತುರುಷ್ಕ ಪಡೆ ಬೇರೆ ಯಾರದೂ ಆಗಿರದೆ ಹೈದರಾಲಿಯದೆ. ಈತ ಕ್ರಿ.ಶ. ೧೭೬೩ರಲ್ಲಿ ಬಿದನೂರನ್ನೂ ವಶಪಡಿಸಿಕೊಂಡು, ಕೆಳದಿ ವಂಶವನ್ನು ಕೊನೆಗಾಣಿಸಿ ದಕ್ಷಿಣಕನ್ನಡಕ್ಕೆ ಬಂದು ವಿಜಯ ಸಾಧಿಸಿದ.[೩]

## (ಅ)ಚಾರಿತ್ರಿಕ ಹಿನ್ನೆಲೆ

ಕಾರ್ಕಳ ಭಾಗದಲ್ಲಿ ಬೆಳೆದ ಸಂಸ್ಕೃತಿಯು ಇಲ್ಲಿನ ಸಮಾಜ, ಧರ್ಮ ಹಾಗೂ ಕಲಾಮಾಧ್ಯಮಗಳಲ್ಲಿ ಅಭಿವ್ಯಕ್ತಗೊಂಡಿದೆ. ಈ ಮಾಧ್ಯಮಗಳ ತ್ರಿವೇಣಿ ಸಂಗಮವೇ ಕಾರ್ಕಳದ ಕೊಡುಗೆ.

ಕಾಲೋಚಿತವಾಗಿ ಜನಜೀವನ, ಸಾಮಾಜಿಕ ವ್ಯವಸ್ಥೆಗಳಲ್ಲಿ ನಡೆಯುವ ಪರಿವರ್ತನೆಗಳು ಕಾರ್ಕಳದಲ್ಲೂ ಆಗಿದೆ. ಕಾಲಾಂತರದಲ್ಲಿ ಕಾರ್ಕಳ ಸಮಾಜವು ಜೈನ ಮತ್ತು ಜೈನೇತರ ಎಂಬ ಎರಡು ಪ್ರಮುಖ ಭಾಗಗಳನ್ನು ಹೊಂದಿತು. ಆಳುವವರನ್ನು ಅನುಸರಿಸುವ ವಿಧಾನ ಬೆಳೆಯಿತು. ನಾನಾ ಕಾರಣಗಳಿಂದಾಗಿ ಆಳುವ ಹಾಗೂ ಅಧಿಕಾರಿ ವರ್ಗದಲ್ಲಿ ವೈವಾಹಿಕ ಸಂಬಂಧಗಳೇರ್ಪಟ್ಟವು. ಮಧ್ಯ ಯುಗದಲ್ಲಿ ಜೈನರಾಜರ ಪ್ರಭಾವವೇ ಇದ್ದುದರಿಂದ ಜೈನ - ಜೈನೇತರ ಸಂಬಂಧಗಳು ಬೆಳೆದವು. ಶ್ರೀಮಂತ ವರ್ಗದಲ್ಲಿ ತಮ್ಮ ಅಂತಸ್ತನ್ನು ಉಳಿಸಿಕೊಳ್ಳುವ ಸಲುವಾಗಿ ಈ ರೀತಿಯ ಸಂಬಂಧಗಳು ಏರ್ಪಟ್ಟವು. ಸಾಮಾನ್ಯ ವರ್ಗ ಇದನ್ನು ಸಂಪೂರ್ಣ ಅನುಸರಿಸದಿದ್ದರೂ, ಅನುಮೋದಿಸಿತು. ಈ ತೆರನಾದ ಸಂಬಂಧ ಹೆಚ್ಚಾಗಿ ಜೈನ ಮತ್ತು ಬಂಟರಲ್ಲಿ.

ಗೋತ್ರಕ್ಕೆ ಸಮಾನವಾದ ಬಳಿಗಳು ಜೈನ ಹಾಗೂ ಬಂಟರಲ್ಲಿ ಬೆಳೆದವು. ಬಳಿಯ ಮೂಲ ಸಾಮಾನ್ಯವಾಗಿ ಹುಟ್ಟಿನಿಂದ, ಆದರೆ ವೃತ್ತಿ ಮತ್ತು ವೈವಾಹಿಕ ಸಂಬಂಧಗಳಿಂದಲೂ ಬಳಿಗಳು ಹುಟ್ಟಿ ಅವುಗಳ ಸಂಖ್ಯೆ ಹೆಚ್ಚಾಯಿತು. ಒಂದೇ ತೆರನಾದ ಬಳಿಗಳು ಜೈನ ಹಾಗೂ ಬಂಟರಲ್ಲಿರುವುದನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಬಹುತೇಕ ಬಳಿಗಳು ಈಗಲೂ ಉಳಿದುಕೊಂಡು ಬಂದಿವೆ.

ವ್ಯವಸಾಯ ಮುಖ್ಯ ಕಸುಬಾಗಿತ್ತು. ಆದರೆ, ವ್ಯಾಪಾರ ವಾಣಿಜ್ಯ ವ್ಯವಹಾರ ಹೆಚ್ಚಿನ ಲಾಭ ತರುವಂತಹದಾಗಿತ್ತು. ಉದ್ಯೋಗದ ಅವಕಾಶಗಳು ವಿಪುಲವಾಗಿದ್ದವು. ವೃತ್ತಿಯಲ್ಲಿ ವಿಶೇಷವೇನೂ ಇರಲಿಲ್ಲ. ಆದರೆ ರಾಜ್ಯ ವಿಸ್ತಾರವಾಗಿದ್ದುದರಿಂದ ಎಲ್ಲ ರೀತಿಯ ವೃತ್ತಿ, ಕಸುಬು, ಉಪಕಸುಬುಗಳೂ ಇದ್ದವು. ಜನಬಳಕೆಯ ಸಾಮಾನುಗಳು ಮತ್ತು ಆಹಾರ ಪದಾರ್ಥಗಳ ಉತ್ಪಾದನೆಯಲ್ಲಿ ಪರಿಪೂರ್ಣತೆಯ ಮಟ್ಟ ಮುಟ್ಟಿತ್ತು. ಇದು ರಾಜ್ಯವನ್ನು ಆರ್ಥಿಕವಾಗಿ ಮುನ್ನಡೆಸಿತು. ಈ ಆರ್ಥಿಕ ಮುನ್ನಡೆಯೇ ಕಳಸ ಕಾರ್ಕಳದ ಅರಸರನ್ನು ಶಕ್ತಿಶಾಲಿಗಳನ್ನಾಗಿ ಮಾಡಿದುದು.[೨]

ಕವಿ ಚದುರ ಚಂದ್ರಮನು ಕಾರ್ಕಳ ನಗರದ ಸುಂದರ ವರ್ಣನೆಯನ್ನು ಕೊಡುತ್ತಾನೆ. ಅವನ ಪ್ರಕಾರ ಇದು ಎಂತಹ ನಗರ! ಎಲ್ಲೆಲ್ಲೂ ರಾಜಬೀದಿಗಳು; ಅದಕ್ಕೊಪ್ಪುವ ಸುಂದರ ಸೌಧಗಳು. ಪಾಂಡ್ಯ ನಗರಿ ಎಂದು ಶೋಭಿಸುವ ಬೆಟ್ಟದಂಗಡಿ, ಜೈನ ಗೇಹಗಳ ಕೇಂದ್ರವಾದ ಹಿರಿಯಂಗಡಿ, ಮಂತ್ರಿ ಮಾಂಡಲೀಕರ, ದಂಡನಾಯಕರ, ಮಣೆಗಾರರ, ಪುಂಡರೀಕರ, ಕಂಚುಗಾರರ ಕೇರಿಗಳಿಂದ ಈ ನಗರ ಶೋಭಿಸುತ್ತಿತ್ತು. ಆ ಕಂಚುಗಾರರ ಕೇರಿಯಾದರೂ ಹೇಗಿತ್ತೆಂದರೆ[೨]

ಅಂಬರದೊಳಗಾಧಾರವಿಲ್ಲೆಂದು ಕು।
ಟುಂಬ ಸಹಿತ ಚಂದ್ರರೆಲ್ಲ ॥
ಇಂಬಾದ ಕಂಚುಗಾರರ ಕೇರಿಯೊಳಗ ಬೀ।
ಡಂ ಬಿಡಿಸಿದಂತೊಪ್ಪುತಿಹವು ॥

ಇಂತಹ ನಗರದಲ್ಲಿ ಗಣಿಕೆಯರ ಕೇರಿಯೂ ಇರುವುದಲ್ಲದೆ, ಬೆಲ್ಲಕ್ಕೆ ಮುತ್ತುವ ನೊಣಗಳಂತೆ ರಾಜವಿಟರನ್ನು ಸುತ್ತುವ ಸೂಳೆಯರು, ಇವರು ಹೇಗಿದ್ದಾರೆಂದರೆ, "ಬೆಲೆವೆಣ್ಣುಗಳ ಸಂಗವಿಲ್ಲದ ನರರಿಗೆ ಕಲೆಯ ಜಾಣ್ಮೆಗಳಿಲ್ಲವೆಂದು ಛಲವ ಪುಟ್ಟಿಸಿ ರಾಜವಿಟರನು ಸೆರೆಗೆಯ್ವ" ಕಲೆಗಾತಿಯರು, ಇವರಲ್ಲದೆ ಪರಿಮಳದ ಹೂಮಾಲೆ ಕಟ್ಟುವ ಹೂವಾಡಗಿತ್ತಿಯರು. ಇವರೂ ಸಹ ವಯ್ಯಾರಿಗಳು.

ಈ ನಗರದ ಮಧ್ಯೆ ರಾಜನ ಅರಮನೆ, ಬಣ್ಣದ ಚಾವಡಿ, ನಾಟಕ ಶಾಲೆ, ಭೋಜನ ಶಾಲೆ, ಆಯುಧಾಗಾರ, ಸಿಂಹಾಸನ ಮಂಟಪ, ದಿವಾಣಸಗ್ಗ, ರಾಣೀ ವಾಸ, ಇವುಗಳಿಂದ ಆ ರಾಜಮಂದಿರ ಶೋಭಿಸುತ್ತಿತ್ತು.

ಇಂತಹ ಚೆಲ್ವಾದ ನಗರ ಚಂದ್ರಮನಿಗೆ ದೇವನಗರಿಯಂತೆ ಕಂಡಿದ್ದರೆ ಆಶ್ಚರ್ಯವಿಲ್ಲ. ಆತ ಹೇಳುತ್ತಾನೆ -

> ಯಾಕಿನ್ನು ಬಹು ಮಾತು ನಾಕಲೋಕವೆ ಬಂದು ।
> ಶ್ರೀ ಕಾರಕಳಾದಕೃತಿಯ ॥
> ತಾ ಕಂಡು ಧರಿಸಿತೊಯೆಂಬಂತೆ ಲೋಕಕೆ ।
> ನೇರವಿಸ್ಮಯವ ಪುಟ್ಟಿಸುವುದು ॥

ಕಾರ್ಕಳದ ಈ ಚಿತ್ರವನ್ನು ಕೊಡುವಲ್ಲಿ ಚಂದ್ರಮ ಕವಿ ತುಂಬಾ ಯಶಸ್ವಿಯಾಗಿದ್ದಾನೆ. ಪ್ರಮುಖ ಕೇಂದ್ರವಾಗಿ ಮೂಡಬಿದಿರೆ ಸಹ ಹೀಗೆಯೆ ಇದ್ದಿರಬಹುದು. ಆದರೆ ಕೇರಿಕೇರಿಗಳ, ಗಣಿಕೆಯರ ವರ್ಣನೆ ಶಿಷ್ಟಾಚಾರಕ್ಕೆ ವಿರುದ್ಧವಾದುದೆಂಬ ಭಾವನೆ ಪ್ರಾಯಶಃ ಕವಿಗಳಲ್ಲಿ ಮೂಡಿ ಅದರ ವರ್ಣನೆ ಮಾಡದೆ ಇರಬಹುದು. ಚಂದ್ರಮ ಎಲ್ಲಾ ಶಿಷ್ಟಾಚಾರಗಳಿಗೆ ಒಳಗಾಗಿದ್ದರೂ ಸಮಾಜದ ಇನ್ನೊಂದು ಮುಖವನ್ನು ವಿವರಿಸದಿದ್ದರೆ ಅಪಚಾರವೆಸಗಿದಂತೆ ಎಂಬ ಭಾವನೆಯಿಂದ ನಗರದ ಎಲ್ಲಾ ಜನರ ಕೇರಿಗಳನ್ನು ವರ್ಣಿಸುತ್ತಾನೆ. ಈ ರೀತಿಯ ನಿಷ್ಠೆ ಎಷ್ಟು ಜನ ಕವಿಗಳಲ್ಲಿ ಇರಲು ಸಾಧ್ಯ?[೪]

ಕವಿ, ಗಮಕಿ, ವಾದಿ, ವಾಗ್ಮಿಗಳು ಈ ನಗರದಲ್ಲಿದ್ದರು. ಕವಿ ಹಾಗೂ ಸಾಹಿತ್ಯಕ್ಕೆ ಪ್ರೋತ್ಸಾಹವಿತ್ತು. ಅದರಂತೆ ವಿದ್ಯಾಪ್ರಸಾರಕ್ಕೂ ಜನ ಮನಸ್ಸು ಹರಿಸಿರಬೇಕು. ದೇವಸ್ಥಾನ, ಮಠ, ಗುರುಮನೆಗಳೇ ಶಾಲೆಗಳಾಗಿದ್ದಿರಬೇಕು. ದುರಾದೃಷ್ಟವಶಾತ್ ಇವುಗಳ ವಿವರಣಾತ್ಮಕ ವರ್ಣನೆ ಎಲ್ಲೂ ದೊರೆಯುವುದಿಲ್ಲ. ಮೂಡಬಿದಿರೆ, ಕಾರ್ಕಳ ಹಾಗೂ ಜೈನ ಮಠಗಳು ವಿದ್ಯಾ ಪ್ರಸಾರದ ಕೇಂದ್ರಗಳಾಗಿದ್ದವು. ಶಾಸ್ತ್ರದಾನಕ್ಕಾಗಿ ಮೂಡಬಿದಿರೆ ಮತ್ತು ಕಾರ್ಕಳಗಳಲ್ಲಿ, ಹೊನ್ನು ದಾನ ಮಾಡಿದ ಎರಡು ಘಟನೆಗಳನ್ನು ಬಿಟ್ಟರೆ ಬೇರಾವ ವಿವರವೂ ದೊರೆಯುವುದಿಲ್ಲ. ವಿಧ್ಯಾಭ್ಯಾಸಕ್ಕಿದ್ದ ಕುಂದುಕೊರತೆ ಏನೇ ಇದ್ದರೂ ಕಾರ್ಕಳ ಮತ್ತು ಮೂಡಬಿದಿರೆ ಕವಿಗಳ ಊರು. ವೃತ್ತ ವಿಲಾಸ, ಕಲ್ಯಾಣಕೀರ್ತಿ, ಯಶಃ ಕೀರ್ತಿ, ಬಾಹುಬಲಿ, ವರ್ಧಮಾನ, ರತ್ನಾಕರ, ನೇಮಣ್ಣ, ಚಂದ್ರಮ, ಶಾಂತಿಕೀರ್ತಿಗಳಂತಹ ಕವಿ ಪುಂಗವರನ್ನು ಸೃಷ್ಟಿಸಿತು ಕಾರ್ಕಳದ ನಾಡು.

ಮೇಲೆ ಹೇಳಿದವರೆಲ್ಲಾ ಜೈನಕವಿಗಳಾದರೆ, ಇನ್ನು 'ಪಟ್ಟಾಭಿರಾಮ'ನೆಂಬ ಬ್ರಾಹ್ಮಣ ಕವಿ ಜೈನ ಮುನಿಗಳ ಆಜ್ಞಾನುಸಾರ ಮೂಡಬಿದಿರೆಯಲ್ಲಿ ಕಾವ್ಯ ರಚಿಸಿದ್ದ.

## ಕಾರ್ಕಳದ ಅರಸರ ಧರ್ಮ

ಸಮಾಜದ ಒಂದು ಅವಿಭಾಜ್ಯ ಅಂಗ 'ಧರ್ಮ', ಅಂತರಂಗ ಬಹಿರಂಗಗಳೆರಡರಲ್ಲೂ ಅಭಿವ್ಯಕ್ತಗೊಳ್ಳುವ ಪ್ರವೃತ್ತಿ ಇದು. ವ್ಯವಸ್ಥಿತ ಸಮಾಜದಲ್ಲಿ ಧರ್ಮ ಹಸನಾಗಿ ಬೆಳೆಯುತ್ತದೆ. ಕಾರ್ಕಳದ ಸೀಮೆಯಲ್ಲಿ ಸುರಾಜ್ಯ ಸ್ಥಾಪನೆಯಾಗಿದ್ದುದರಿಂದ ಧರ್ಮದ ಬೆಳವಣಿಗೆಗೆ ಯಾವ ಕಾಲದಲ್ಲೂ ಚ್ಯುತಿ ಬರಲಿಲ್ಲ. ಆಳುಪರ ಕಾಲದಲ್ಲಿ ಶೈವಧರ್ಮ ಇಲ್ಲಿ ನೆಲೆಯೂರಿತು. ಶಿವ ದೇವಾಲಯಗಳ ನಿರ್ಮಾಣದಲ್ಲಿ ಇದು ಅಭಿವ್ಯಕ್ತಗೊಂಡಿತು. ಕಾಂತಾವರ, ನಂದಳಿಕೆ ಮತ್ತು ಪೆರ್ವಾಜೆಗಳಲ್ಲಿ ಶಿವ ದೇವಾಲಯಗಳ ನಿರ್ಮಾಣವಾಯಿತು. ಕ್ರಮೇಣ ಶಿವಾಲಯಗಳ ಸಂಖ್ಯೆ ಹೆಚ್ಚಿತು. ಶಕ್ತಿ ಆರಾಧನೆಯೂ ಇಲ್ಲಿ ಪ್ರಚಲಿತವಾಗಿತ್ತೆನ್ನುವುದು. ಬೆಳ್ಮಣ್ಣು ದುರ್ಗಾಪರಮೇಶ್ವರಿ ದೇವಾಲಯದಿಂದ ವ್ಯಕ್ತವಾಗುತ್ತದೆ.

ಆಳುಪರ ನಂತರ ಕಾರ್ಕಳದ ವಿಸ್ತಾರ ಭಾಗವನ್ನು ಜೈನ ರಾಜರುಗಳು ಆಳಿದರು. ಇವರ ಕಾಲದಲ್ಲಿ ಜೈನ ಮತ್ತು ಹಿಂದೂ ಧರ್ಮಗಳು ಒಟ್ಟಾಗಿಯೇ ಬೆಳೆದವು. ಬಸದಿ ದೇವಾಲಯಗಳೆರಡೂ ಸಂಖ್ಯೆಯಲ್ಲಿ ವೃದ್ಧಿಗೊಂಡವು. ರಾಜರು ಹಾಗೂ ಅವರ ಸಾಮಂತರು ಎರಡಕ್ಕೂ ದಾನಧರ್ಮಗಳನ್ನು ಮಾಡಿದರು. ಮಿಗಿಲಾಗಿ ತಮ್ಮ ಮನೆದೇವರಾದ ತೀರ್ಥಂಕರರನ್ನಷ್ಟೇ ಅಲ್ಲದೆ ಊರ ದೇವರನ್ನು ತಮ್ಮ ಆರಾಧ್ಯ ಮೂರ್ತಿಗಳನ್ನಾಗಿ ಮಾಡಿಕೊಂಡರು. ಕಳಸ - ಕಾರ್ಕಳದ ಅರಸರಿಗೆ ಕಳಸದ ಕಳಸೇಶ್ವರ, ಕೆರವಾಸೆ, ಮಿಯಾರು, ಪೆರುವಾಜೆಗಳ ಮಹಾಲಿಂಗೇಶ್ವರ ಆರಾಧ್ಯ ದೇವರಾದರು. ಮಾಳ, ಅಜೆಕಾರು, ಹೆರ್ಮುಂಡೆಗಳಲ್ಲಿ ಜನಾರ್ದನ. ಹಿರಿಯಂಗಡಿ, ಕಾಬೆಟ್ಟುಗಳ ವೇಣುಗೋಪಾಲ ಸಹ ಇವರಿಂದ ಪೂಜೆಗೊಳಗಾಗಿ ದಾನಧರ್ಮಗಳನ್ನು ಪಡೆದಿದೆ. ಕಾಂತಾವರದ ಕಾಂತೇಶ್ವರ ಇವರಿಗೆ ಅಷ್ಟೇ ಪವಿತ್ರವಾದುದು. ಅಷ್ಟೇ ಅಲ್ಲದೆ, ನಂದಳಿಕೆಯ ದೈವಗಳು ಅಷ್ಟೇ ಜೈನ ಜೈನೇತರರೆಲ್ಲರನ್ನೂ ಒಂದೇ ನೆಲೆಗಟ್ಟಿನಲ್ಲಿ ಸೇರಿಸಿತ್ತು.

ಜೈನ ಅರಸರ ಈ ತೆರನಾದ ಧಾರ್ಮಿಕ ಭಾವನೆ ಕರಾವಳಿ ಜಿಲ್ಲೆಗೆ ವಿಶಿಷ್ಟವಾದುದು. ಮಲೆನಾಡಿನ ಕಾರ್ಕಳ ಇದರ ತವರು ಮನೆಯಾಗಿದೆ.[3]

ಕಾರ್ಕಳದ ಅರಸರ ಉದಾರ ನೀತಿಗೆ ಮತ್ತೊಂದು ಉದಾಹರಣೆ ಕೊಡಬಹುದು. ಪೋರ್ಚುಗೀಸರ ಆಗಮನದಿಂದ ಗೋವಾ ಹಾಗೂ ಕೊಂಕಣದ ಭಾಗಗಳು ಅಪಾರ ತೊಂದರೆಗೊಳಗಾದವು. ಮತಾಂಧ ಪೋರ್ಚುಗೀಸರು ನಡೆಸಿದ ಕ್ರೂರ ಮತಾಂತರಕ್ಕೆ ಹೇಸಿ ಜನರು ಈ ಭಾಗದಿಂದ ಧರ್ಮರಕ್ಷಣಾರ್ಥ ಬೇರೆಡೆಗೆ ತೆರಳಿದರು. ಹೀಗೆ ಆಶ್ರಯ ಅರಸಿ ಬಂದ ಕೊಂಕಣಸ್ಥ ಜನರಿಗೆ (ಗೌಡಸಾರಸ್ವತರಿಗೆ) ಕಾರ್ಕಳದ ರಾಜ ಆಶ್ರಯ, ರಕ್ಷಣೆಗಳನ್ನು ಒದಗಿಸಿದ ಅವರುಗಳು ದೇವಾಲಯ ಮತ್ತು ಮನೆಗಳನ್ನು ನಿರ್ಮಿಸಿಕೊಳ್ಳಲು ಸ್ಥಳದ ಸಹಾಯ ಸಹಕಾರಗಳನ್ನು ನೀಡಿದ. ಅಷ್ಟೇ ಅಲ್ಲದೆ, ಬಂದವರ ಮೂಲ ಉದ್ಯೋಗವಾದ ವ್ಯಾಪಾರವನ್ನು ತನ್ನ ರಾಜ್ಯದೆಲ್ಲೆಡೆ ಯಾವ ಅಡ್ಡಿ ಆತಂಕಗಳಿಲ್ಲದೆ ನಡೆಸಿಕೊಂಡು ಹೋಗಲು ಅನುಕೂಲತೆ ಮಾಡಿಕೊಟ್ಟ. ರಾಜಧಾನಿಗಳಾದ ಕಳಸ

ಮತ್ತು ಕಾರ್ಕಳಗಳಲ್ಲಿ ಇವರಿಗೆ ಸೂಕ್ತ ಸ್ಥಳಗಳನ್ನು ಕೊಟ್ಟ ಅಷ್ಟೇ ಅಲ್ಲದೆ ಗೌರವದ ಸ್ಥಾನಮಾನಗಳನ್ನು ನೀಡಿದ. ಇದರಿಂದಾಗಿ ಗೌಡಸಾರಸ್ವತ ಬ್ರಾಹ್ಮಣ ಸಮಾಜ ಕಾರ್ಕಳ ರಾಜ್ಯದೆಲ್ಲೆಡೆ ಹರಡಿತು. ತಮ್ಮ ಆರಾಧ್ಯ ದೈವ ಶ್ರೀನಿವಾಸ (ವೆಂಕಟರಮಣ)ನ ದೇವಾಲಯಗಳನ್ನು ಕಳಸ ಮತ್ತು ಕಾರ್ಕಳ ರಾಜಧಾನಿಗಳಲ್ಲಿ ಈ ಸಮಾಜ ಕಟ್ಟಿಕೊಂಡಿತು. ಕಸುಬಾದ ವ್ಯಾಪಾರದೊಂದಿಗೆ ಧಾರ್ಮಿಕ ಮನೋಭಾವವನ್ನು ಬೆಳೆಸಿಕೊಂಡ ಈ ಜನ ಸಮಾಜದ ಏಳಿಗೆಗೆ ತಮ್ಮ ದೇಣಿಗೆಯನ್ನು ನೀಡಿದರು. ಆ ಕಾರ್ಯ ಈಗಲೂ ಮುಂದುವರಿಯುವುದನ್ನು ನಾವು ಕಾಣಬಹುದು.[೩]

ಜೈನ ಮುನಿಗಳ ಪ್ರಭಾವ ರಾಜರ ಹಾಗೂ ಧರ್ಮ ಬಾಂಧವರ ಮೇಲೆ ಅಪಾರವಾಗಿತ್ತು. ಬಸದಿಗಳ ನಿರ್ಮಾಣ ಗುಮ್ಮಟ ಸ್ಥಾಪನೆ ಇತ್ಯಾದಿ ಧರ್ಮಕಾರ್ಯಗಳು ಇವರ ಅನುಮತದಿಂದ ನಡೆದವು. ಮೂಡಬಿದಿರೆಯು ದೂರದೂರದ ನಾಡಿನಿಂದ ಜನರನ್ನು ಆಕರ್ಷಿಸುತ್ತಿತ್ತು.

ಸಾಮಾನ್ಯ ವರ್ಗದ ಜನ ಧಾರ್ಮಿಕ ಪ್ರವೃತ್ತಿಯನ್ನು ಬೆಳೆಸಿಕೊಂಡು ಮುನಿಜನರ ಪ್ರೀತಿಗೆ ಪಾತ್ರರಾದರು. ಉತ್ತಮ ಶೆಟ್ಟಿ ಎಂಬ ಜೈನ ಶ್ರೇಷ್ಠಿಯು ಮುನಿಗಳ ಉಪದೇಶದಿಂದ ಸಲ್ಲೇಖನ ವ್ರತ ಕೈಗೊಂಡು ಸಮಾಧಿ ಮರಣ ಹೊಂದಿದರು. ಈತನ ನಿಷಿಧಿಗೆ ಕಲ್ಲು ಮೂಡಬಿದಿರೆ ಸೆಟ್ರ ಬಸದಿಯಲ್ಲಿದೆ. ಮುಂದೆ ಚಂದ್ರಕೀರ್ತಿ ಎಂಬ ನಿರ್ವಾಣ ಮುನಿ ಸನ್ಯಾಸನ ವಿಧಿಯಿಂದ ಸ್ವರ್ಗಸ್ಥರಾದರು. ಈಗ ನಾಯಿ ಬಸದಿ ಎಂದು ಕರೆಸಿಕೊಳ್ಳುವ ಕಲ್ಲು ಮಂಟಪವೇ ಈ ಮುನಿಗಳ ನಿಷಿಧಿಗೆ ಮಂಟಪ.[೩]

ಮುನಿಗಳ ಪ್ರಭಾವ ಹೇಳುವಾಗ ಮೂಡಬಿದಿರೆ ಸೇನಗಣದ ಸಮಂತಭದ್ರ ಮುನಿಗಳ ಬಗ್ಗೆ ಒಂದು ಮಾತು ಅವಶ್ಯಕ. ಮೂಡಬಿದಿರೆಯ ಎರಡು ಕೇರಿಯ ಜನ ದೀಪಾವಳಿ ಹಬ್ಬದ ಸಮಯದಲ್ಲಿ ಮೋಜಿಗಾಗಿ ಹೊಡೆದಾಡಿ ರಕ್ತಸ್ರಾವ ಮಾಡುವ ಕ್ರಮ ಬೆಳೆದಿತ್ತು. ಜಿನಧರ್ಮಕ್ಕೆ ವಿರುದ್ಧವಾದ ಈ ಕ್ರಮವನ್ನು ತಪ್ಪಿಸಲು ಮುನಿ ತನ್ನ ಪರಿವಾರ ಸಮೇತ ಉಪವಾಸ ಮಾಡಿ ಜನರನ್ನು ಪರಿವರ್ತಿಸಿದರು. ಅನಂತರ ಜನ ಬಸದಿಯಲ್ಲಿ ಲಕ್ಷ ದೀಪೋತ್ಸವ ಮಾಡುವ ಮೂಲಕ ಹಬ್ಬ ಆಚರಿಸುವುದಾಗಿ ಪ್ರತಿಜ್ಞೆ ಕೈಗೊಂಡರು. ಈ ವಿಚಾರ ಇಲ್ಲಿನ ಶಾಸನವೊಂದರಿಂದ ತಿಳಿದುಬರುತ್ತದೆ.

ಜೈನರು ಜೈನೇತರರೊಡನೆ ಬೆರೆಯುವಾಗ ಧಾರ್ಮಿಕ ವಿಚಾರದಲ್ಲಿ ಹೊಸ ಅನುಭವಗಳುಂಟಾದವು. ದೇವಸ್ಥಾನಗಳಲ್ಲಿನ ಪೂಜಾ ಕ್ರಮ, ವಿಧಿ, ಉತ್ಸವಾದಿಗಳ ಪ್ರಭಾವ ಬಸದಿಗಳ ಪೂಜಾ ವಿಧಾನದ ಮೇಲಾಯಿತು. ವೈಭವದ ಉತ್ಸವ ರಥೋತ್ಸವಗಳಲ್ಲಿ ಜೈನ ಸಮುದಾಯ ಪಾಲ್ಗೊಳ್ಳುವ ರೂಢಿ ಬೆಳೆಯಿತು. ಅಷ್ಟೇ ಅಲ್ಲ ಊರ, ಗ್ರಾಮದ ಪ್ರಮುಖ ದೇವಾಲಯಗಳ ಆಗುಹೋಗುಗಳ ಮೇಲ್ವಿಚಾರ ಜವಾಬ್ದಾರಿ ಜೈನ ರಾಜರ, ಬಲ್ಲಾಳುಗಳ ಮೇಲಿತ್ತು. ದೇವಸ್ಥಾನಗಳಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ರಮ ಪ್ರಾರಂಭವಾಗಬೇಕಾದರೆ ಇವರ ಹಾಜರಿ ಅತ್ಯಾವಶ್ಯಕವಾಯಿತು. ಈ ಒಂದು ಸಂಪ್ರದಾಯವೇ ಬೆಳೆದು ಬಂತು. ಇದು ಸರ್ವಧರ್ಮ ಸಮನ್ವಯವನ್ನು ಸೂಚಿಸುವುದಾಗಿದೆ. ಅಲ್ಲದೆ ಇಲ್ಲಿ ಬೆಳೆದು ಬಂದ ಸಂಸ್ಕೃತಿಯ ಒಂದು ವಿಶೇಷ ಇದು.

ಸಮನ್ವತೆಯ ತಳಹದಿಯ ಮೇಲೆ ಜೈನ ಮತ್ತು ಜೈನೇತರರು ಒಂದುಗೂಡುವ ಒಂದು ಮುಖ್ಯ ಕಾರ್ಯಕ್ರಮವೆಂದರೆ, ಭೂತದ ಕೋಲ. ಜೈನರಲ್ಲಿ ಭೂತಪೂಜೆಯು ಒಂದು ವಿಶೇಷವೇ ಸರಿ. ಈ ಪದ್ಧತಿ ದ. ಕನ್ನಡಕ್ಕೆ ಮಾತ್ರ ಸೀಮಿತವಾದದ್ದು.

ಕೆಳದಿ ಅರಸರ ಆಗಮನದಿಂದ ವೀರಶೈವ ಮತ ಇಲ್ಲಿಗೆ ಕಾಲಿರಿಸಿತು. ಜಂಗಮಮತ ಮತ್ತು ವೀರಭದ್ರ ದೇವಸ್ಥಾನಗಳು ಅಲ್ಲಲ್ಲಿ ಹುಟ್ಟಿಕೊಂಡವು. ಕಾರ್ಕಳ ಮತ್ತು ಎಣ್ಣೆಹೊಳೆಗಳಲ್ಲಿನ ಜಂಗಮ ಮಠಗಳನ್ನು ಇಲ್ಲಿ ಉದಾಹರಣೆಗಾಗಿ ಕೊಡಬಹುದು. ಇದಕ್ಕೆ ಹಲವಾರು ಕಡೆಗಳಲ್ಲಿ ದತ್ತಿ ಭೂಮಿಗಳಾಗಿದ್ದವು. ಕೆಲವು ಗದ್ದೆಗಳಿಗೆ ಮಠದಕಣಿ ಎಂಬ ಹೆಸರಿರುವುದನ್ನು ಈಗಲೂ ಕಾಣಬಹುದು. ಕಾರ್ಕಳದ ಕುಂಟಲಪಾಡಿಯಲ್ಲಿ ಮಠದ ಕೆರೆಯೊಂದಿದೆ. ಇದೊಂದು ವಿಶಾಲವಾದ ಕೃಷಿ ಕಾರ್ಯಕ್ಕಾಗಿಯೇ ಕಟ್ಟಲ್ಪಟ್ಟ ಕೆರೆಯಾಗಿದ್ದು ಹಿಂದೆ ಇದರ ಸುತ್ತಲಿರುವ ಎಲ್ಲ ಜಮೀನು ಕಾರ್ಕಳದ ಜಂಗಮಮಠಕ್ಕೆ ಸೇರಿತ್ತು. ಅದರ ಕುರುಹಾಗಿ ಕೆರೆಯ ಬಳಿ ಇರುವ ಒಂದು ಚಿಕ್ಕ ಬಸವಣ್ಣನ ದೇವಾಲಯವನ್ನು ಈಗಲೂ ನೋಡಬಹುದು.[೩]

ಸರಾಸರಿ ೫೭೪೨.೮ಮಿಲಿ ಮೀಟರ್ ಮಳೆಯಾಗುವ ಕಾರ್ಕಳ ಉಡುಪಿ ಜಿಲ್ಲೆಯಲ್ಲೇ ಪ್ರಥಮ ಸ್ಥಾನದಲ್ಲಿದೆ. ಆದುದರಿಂದ ಕಾರ್‌ಕಳ - ಮಳೆಯ ಊರು - ಎಂಬ ಹೆಸರು ಬಂತೆಂದು ಕೆಲವರ ಅಭಿಪ್ರಾಯವಾಗಿದೆ. ಇನ್ನು ಕೆಲವರು ಕರ್+ಕಲ್ಲಿನಿಂದ ಕಾರ್ಗಲ್ - ಕಾರ್ಕಳವೋ, ಅಥವಾ ಕಾರ್+(ಮಳೆ) ಕಳ (ನೆಲೆ) ಎಂಬುದರಿಂದ ಕಾರಕಳವಾಗಿರಬಹುದು. ಅದೇನೇ ಇರಲಿ, ಕಲ್ಲು ಇರುವುದು ಕಣ್ಣಿಗೆ ಕಾಣುತ್ತದೆ. ಮಳೆ ಬೀಳುವುದು ಬೆಳೆಯಿಂದ ತಿಳಿದುಬರುತ್ತದೆ. ಕಲೆಯಿಂದ ಶಿಲೆಯಮೃತ, ಲಲಿತಕಲೆ, ಹೃತ್‌ಸುಕೃತ - ಇದು ಡಿ. ವಿ. ಜಿ ಯವರ ಒಂದು ಸೂಕ್ತಿ. ಬೇಲೂರು ಗುಡಿಯನ್ನು ಕುರಿತು ಅವರು ಆಡಿದ ಮಾತು ಇದು. ಈ ಮಾತು ಅಷ್ಟೇ ಸಮುಚಿತವಾಗಿ ಕಾರ್ಕಳಕ್ಕೂ ಅನ್ವಯಿಸುತ್ತದೆ. ಏಕೆಂದರೆ ಶಿಲಾಮಯವಾದ ಕಾರ್ಕಳವೂ ಒಂದು 'ಕಲೆಯ ಬಲೆ', ಬಿಳಿಯಕೊಳದ, ಕಾರಕಳದ ನಿಡುಕರೆನಿತೊ ಬಂಧುರಂ ಎಂದು ಹಾಡಿ ಕೊಂಡಾಡಿದ್ದಾರೆ. ದಿ। ಗೋವಿಂದ ಪೈ. ಶ್ರವಣಬೆಳಗೊಳದಲ್ಲಿರುವಂತೆಯೇ ಭವ್ಯವಾದ ಗೊಮ್ಮಟ ಮೂರ್ತಿ ಕಾರ್ಕಳದಲ್ಲೂ ಇದೆ. ಅದರೊಂದಿಗೆ ಚತುರ್ಮುಖ ಬಸದಿ, ಹಿರಿಯಂಗಡಿಯ ಉನ್ನತಮಾನಸ್ತಂಭ, ಅನಂತಶಯನನ ಸುಪ್ರಸನ್ನ ಮೂರ್ತಿಗಳೂ ಕಾರ್ಕಳದಲ್ಲಿವೆ.

ಕಾರ್ಕಳವು ಮಳೆಯಿಂದ ಕುಡಿಯುವ ನೀರು, ಹಸುರಿನ ಬೆಳೆಯಾದರೆ, ಕಲ್ಲು ಕಲೆಗಾಗುತ್ತವೆ. ಒರಟು ಬಂಡೆಯ ಅಡಿಯಲ್ಲೋ, ಎಡೆಯಲ್ಲೋ ತಿಳಿನೀರು ಒಸರುತ್ತದೆ. ಕಾಠಿನ್ಯದ ಗರ್ಭವೇ ಮೃದುತ್ವದ ಮೂಲ ಎಂಬ ತತ್ವವನ್ನು ಸಾರುತ್ತದೆ. ಕಾರ್ಕಳಕ್ಕೆ ಇದು ಎರಡೂ ಸರಿಯೇ. ದೃಶ್ಯ, ಹೃದ್ಯ ( ಅಥವಾ ಶ್ರವ್ಯ ) ಎರಡೂ ಇಲ್ಲಿವೆ. ಸಾಹಿತ್ಯದ ಮೂಲಾಂಶವೇ ಅದು. ಶಬ್ದ ಜಾಲಗಳು ಕಣ್ಣು ಕಿವಿಗಳನ್ನು ಒಲಿಸಿದರೆ, ಅರ್ಥ ಸಂಪತ್ತು ಹೃದಯವನ್ನು ರಮಿಸುತ್ತದೆ. ಸುಮಾರು ೬ ಶತಮಾನಗಳಿಂದ ಕಾರ್ಕಳದಲ್ಲಿ ಸಾಹಿತ್ಯ ಸೃಷ್ಟಿ ನಡೆಯುತ್ತಿದೆ. ಒಮ್ಮೊಮ್ಮ ವಿರಳವಾಗಿ, ಒಮ್ಮೊಮ್ಮೆ ಸಾಂದ್ರವಾಗಿ ಆದರೂ ಒಟ್ಟಿನಲ್ಲಿ ಪರಿಣಾಮಕಾರಿಯಾಗಿ ನಡೆಯುತ್ತದೆ. ರಾಜಾಶ್ರಯದಲ್ಲಿ, ಸಂಘಸಂಸ್ಥೆಗಳ ಮೂಲಕ ಅಥವಾ ಎರಡಕ್ಕೂ ದೂರವಾಗಿ ವೈಯಕ್ತಿಕ ನೆಲೆಯಲ್ಲಿ ಸಾಹಿತ್ಯ ರಚನೆ ಆಗುತ್ತಿದೆ.

## ಜೈನ ಸಮಾಜ

ಜೈನರು ಪಶ್ಚಿಮ ಕರಾವಳಿಯ ದಕ್ಷಿಣಭಾಗದಲ್ಲಿ ಹಿಂದೆ ತಮ್ಮದೇ ಆದ ಪ್ರಭಾವವನ್ನು ಹೊಂದಿದ್ದರು. ಕಾರ್ಕಳ ಮತ್ತು ಮೂಡಬಿದ್ರೆಯಲ್ಲಿ ದೊರಕಿರುವ ಶಾಸನಗಳ ಪ್ರಕಾರ, ಜೈನರು ಕಾರ್ಕಳ ತಾಲೂಕಿನಲ್ಲಿ ೯ ನೇ ಶತಮಾನಕ್ಕಿಂತ ಮುಂಚಿತವಾಗಿಯೇ ನೆಲೆಸಿದ್ದರು ಎಂಬುದು ತಿಳಿದುಬರುತ್ತದೆ. ಡಾ। ಪಿ.ಎನ್. ನರಸಿಂಹಮೂರ್ತಿಯವರ ಪ್ರಕಾರ ಜೈನಮತೀಯರು ಈ ಪ್ರಾಂತ್ಯದಲ್ಲಿ ೬ ಅಥವಾ ೭ನೇ ಶತಮಾನದಲ್ಲಿಯೇ ನೆಲೆಸಿದ್ದರು. ಬನವಾಸಿಯ ಕದಂಬರು ದಕ್ಷಿಣ ಕನ್ನಡದಲ್ಲಿ ತಮ್ಮ ಪ್ರಾಬಲ್ಯವನ್ನು ಸಾಧಿಸಿದಾಗ, ಜೈನರ ಬಗ್ಗೆ ಅನೇಕ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ. ಬಾದಾಮಿಯ ಚಾಲುಕ್ಯರು, ಅಳುಪರು, ಕಡಲತೀರದಲ್ಲಿ ಜೈನರ ಸಂತತಿಯ ಬಗ್ಗೆ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ.[೧೦]

## ೨.೩ ವೇಣೂರಿನ ಗೊಮ್ಮಟ

ತುಳುನಾಡಿನಲ್ಲಿ ಮತ್ತೊಂದು ಬಾಹುಬಲಿ ವಿಗ್ರಹ ವೇಣೂರಿನಲ್ಲಿದೆ. ಇದನ್ನು ಚಾಮುಂಡಾನ್ವಯದ ಅಜಿಲ ಮನೆತನದ ತಿಮ್ಮರಾಜನು ಚಾರುಕೀರ್ತಿಮುನಿಗಳ ಉಪದೇಶದಿಂದ ಕ್ರಿ. ಶ. ೧೬೦೩ ರಲ್ಲಿ ಸ್ಥಾಪಿಸಿದಂತೆ ಅಲ್ಲಿಯ ಶಾಸನವು ವಿವರಿಸುತ್ತದೆ. ಇದರ ಎತ್ತರ ೩೫ ಅಡಿಗಳು. ಈ ಮೂರ್ತಿಯ ಹಿಂದೆ ಪಾದದ ಮೊಳಕಾಲಿನವರೆಗೆ ಅಗಲವಾದ ಶಿಲಾಫಲಕವಿದ್ದು ಶಿಲ್ಪಕ್ಕೆ ಆಧಾರ ನೀಡಿದೆ. ಎರಡೂ ಪಾರ್ಶ್ವದಲ್ಲಿ ಹುತ್ತಗಳಿದ್ದು, ಬಳುಕಿ ಬಾಗುತ್ತ ಮೇಲೇರುವಂತೆ ಕುಕ್ಕುಟ ಸರ್ಪಗಳನ್ನು ಚಿತ್ರಿಸಿದ್ದಾರೆ. ಪಾದಗಳ ನಡುವಿನಿಂದ ಬಳಸಿದ ಎರಡು ಮಾಧವೀಲತೆಗಳು, ತೊಡೆಯನ್ನು ಸುತ್ತುವರಿದು ಮೇಲಕ್ಕೆ ಹಬ್ಬಿ ಎರಡೂ ಕೈಗಳನ್ನು ಬಳಸಿ ಭುಜದತ್ತ ಸಾಗಿವೆ. ಗುಂಗುರು ಕೂದಲು, ಗಿಳಿಮೂಗು, ಮಂದಹಾಸ ಬೀರುವ ಮುಖಮುದ್ರೆ- ಇದರ ವೈಶಿಷ್ಟ್ಯವೆನ್ನಬಹುದು. ಉಳಿದ ಮೂರ್ತಿಗಳಂತೆ ಈ ವಿಗ್ರಹ ಬೆಟ್ಟದ ಮೇಲೆ ಇರದೆ, ಒಂದು ಸಮತಟ್ಟಾದ ಪ್ರದೇಶದಲ್ಲಿ ಸ್ಥಾಪನೆಗೊಂಡಿದೆ. ಕಗ್ಗಲ್ಲು ಹಾಸಿನ ಮುಖಮಂಟಪ, ಆಕರ್ಷಕ ಧ್ವಜಸ್ತಂಭ, ಪೀಠವನ್ನೇರುವ ಉಭಯ ಪಾರ್ಶ್ವಗಳಲ್ಲಿ ಕಲ್ಲಿನಿಂದ ನಿರ್ಮಾಣಗೊಂಡ ಆನೆಗಳು, ಮೂರ್ತಿಯ ಹಿಂದೆ ಕಲ್ಲು ಚಪ್ಪರವನ್ನು ನಿರ್ಮಿಸಲಾಗಿದೆ. ಈ ವಿಗ್ರಹದ ಪ್ರತಿಷ್ಠಾಪನೆಯ ಹಿನ್ನಲೆಯಲ್ಲಿ ಒಂದು ಕುತೂಹಲಕಾರಿ ಕತೆಯಿದೆ. “ಚಾಮುಂಡರಾಯನಂತೆ ತಾನೂ ಗೊಮ್ಮಟನನ್ನು ಕೆತ್ತಿಸಿ ಕೀರ್ತವಂತನಾಗಲು ಅಜಿಲರಸರು ಬಯಸಿದರು. ಆದರೆ ಅದೇ ವೇಳೆ ಕಾರ್ಕಳದ ಭೈರರಸು ಕೂಡ ಗೊಮ್ಮಟ ಪ್ರತಿಷ್ಠೆ ನಡೆಸಿದ್ದರು. ಇಲ್ಲಿ ಬೇರೆ ಯಾರೂ ಸ್ಥಾಪಿಸಬಾರದೆಂದು ಭೈರರಸ ವೇಣೂರಿನ ವಿಗ್ರಹವನ್ನು ತನಗೆ ಒಪ್ಪಿಸಬೇಕೆಂದೂ, ಇಲ್ಲವಾದರೆ ಯುದ್ಧವೆಂದೂ ಅಜಿಲರಿಗೆ ತಿಳಿಸಿದ. ಆಗ ಅಜಿಲರು ಸಿದ್ಧವಾಗಿದ್ದ ವಿಗ್ರಹವನ್ನು ಮರಳಿನಲ್ಲಿ ಹೂತು, ಯುದ್ಧಮಾಡಿ ಗೆದ್ದನಂತರವೇ ಪ್ರತಿಷ್ಠೆ ಮಾಡಿಸಿದರು ಎಂದು ದಂತಕಥೆಗಳು ಹೇಳುತ್ತವೆ.

## ೨. (ಅ) ರಾಜಕೀಯ ಹಿನ್ನೆಲೆ - ವೇಣೂರಿನ ಅಜಿಲರು

ಬೆಳ್ತಂಗಡಿ ತಾಲೂಕಿನ ವೇಣೂರಿನಿಂದ ಮತ್ತು ಅನಂತರ ಅಳದಂಗಡಿಯಿಂದ ಆಳ್ವಿಕೆ ನಡೆಸಿದ ಅಜಿಲರು ತಮ್ಮನ್ನು ಚಂದ್ರವಂಶದವರೆಂದೂ, ಸಾಳುವ ಅರಸರೆಂದೂ ಕರೆದುಕೊಂಡಿದ್ದಾರೆ. ಅಳದಂಗಡಿಯಲ್ಲಿ ಈಗಲೂ ಇವರ ಅರಮನೆಯಿದ್ದು ಅಲ್ಲಿ ಅವರ ವಂಶಜರು ವಾಸವಾಗಿದ್ದಾರೆ. ಈಗಿರುವ ಅರಮನೆಗಿಂತಲೂ ಹಳೆಯದಾದ ಒಂದು ಅರಮನೆ, ಅಳದಂಗಡಿಯ ಸಮೀಪವಿರುವ ಬರಯ ಎಂಬ ಊರಿನಲ್ಲಿ ಇದೆ. ವೇಣೂರಿನಲ್ಲಿದ್ದ ಅರಮನೆ ಸಂಪೂರ್ಣ ನಾಶವಾಗಿದ್ದು, ಅದರ ಅವಶೇಷಗಳು ಕಾಣಸಿಗುತ್ತವೆ. ವೇಣೂರಿನ ರಾಜ್ಯಕ್ಕೆ ಪೂಂಜಳಿಕೆ ರಾಜ್ಯವೆಂದು ಶಾಸನಗಳು ಹೆಸರಿಸುತ್ತವೆ. ಅಳದಂಗಡಿಗೆ ರಾಜಧಾನಿಯನ್ನು ಸ್ಥಳಾಂತರಿಸಿದ ಮೇಲೆ, 'ಅರುವ' ರಾಜ್ಯವೆಂದು ಹೆಸರಾಯಿತು.[೫] ಇವರು ಜೈನಮತಾವಲಂಬಿಗಳೂ ಅಳಿಯಕಟ್ಟಿನವರೂ ಆಗಿದ್ದರು. ವೇಣೂರಿನ ಮಹಾಲಿಂಗೇಶ್ವರನ ಭಕ್ತರು. ಕ್ರಿ. ಶ. ೧೬೦೪ ರ ಒಂದು ಶಾಸನದಲ್ಲಿ ಇವರು ತಮ್ಮ ಚಾಮುಂಡಾನ್ವಯದವರೆಂದು ಹೇಳಿಕೊಂಡಿರುವುದನ್ನು ಗಮನಿಸಬಹುದು. ಬಹುಶಃ ಗಂಗರ ಸೇನಾಪತಿಯಾಗಿದ್ದು, ಶ್ರವಣಬೆಳಗೊಳದಲ್ಲಿ ಗೋಮಟೇಶ್ವರನ ಪ್ರತಿಷ್ಠಾಪನೆ ಮಾಡಿದ ಚಾಮುಂಡರಾಯನ ವಂಶಜರೆಂದು ತೋರುತ್ತದೆ.[೫]

## 2.(ಆ) ಚಾರಿತ್ರಿಕ ಹಿನ್ನೆಲೆ

ಕ್ರಿ. ಶ.೧೧೧೮ ರ ವೇಣೂರಿನಲ್ಲಿರುವ ಶಾಸನವೊಂದರಲ್ಲಿ ಉಕ್ತವಾದ ಸೇವ್ಯಗೆಲ್ಲರಸನು ಈ ವಂಶದ ಪ್ರಥಮ ದೊರೆಯೆಂದು ಹೇಳಬಹುದು ಆ ತರುವಾಯ ಕಾಮಾದೇವಿಯ ಮಗ ಸೋಮನಾಥನು ಕ್ರಿ. ಶ. ೧೪೪೯ ರಲ್ಲಿ ಆಳ್ವಿಕೆಯನ್ನು ನಡೆಸಿದನು. ತಾಯಿಯಾದ ಕಾಮಾದೇವಿಯು ಸ್ವಲ್ಪಕಾಲ ಆಡಳಿತ ನಡೆಸಿರಬೇಕೆಂದು ಊಹಿಸಲಾಗುತ್ತದೆ. ಕ್ರಿ. ಶ. ೧೪೪೯ ರ ಶಾಸನವೊಂದರಲ್ಲಿ ಪೂಂಜಳಿಕೆ ರಾಜ್ಯವನ್ನು ಪಾಲಿಸುವ ಮಾಂಡಳಿಕ ಸೋಮನಾಥನ ತಾಯಿಯು ನಾರಾವಿಯ ಸೂರ್ಯನಾರಾಯಣ ದೇವಾಲಯಕ್ಕೆ ದಾನ ನೀಡಿದಂತೆ ತಿಳಿದುಬರುತ್ತದೆ. ಇತ್ತೀಚಿಗೆ ಬೆಳಕಿಗೆ ಬಂದಿರುವ ಬಳಂಜದ ಶಾಸನದಲ್ಲಿ ಶಕವರ್ಷ ೧೪೧೧ ರಲ್ಲಿ ಪಂಚಲಿಂಗ ದೇವರಿಗೆ ಮಂಡಳಿಕ ಸೋಮನಾಥ ಪೆರ್ನ್ಡಂತರಸವೊಡೆಯರ ತಾಯಿಯಾದ ರಾಮಾದೇವಿಯವರ ನಿರೂಪದಿಂದ ನೈವೇದ್ಯಕ್ಕೆ ದಾನ ನೀಡಿದಂತೆ ಹೇಳಲಾಗಿದೆ. ಹೀಗಾಗಿ ಸೋಮನಾಥ ವೊಡೆಯರ ತಾಯಿಯ ಹೆಸರು, ಕಾಮಾದೇವಿಯೆನ್ನುವುದಕ್ಕಿಂತ ರಾಮಾದೇವಿಯೆಂದು ಕರೆಯುವುದು ಹೆಚ್ಚು ಸೂಕ್ತವೆಂದು ತೋರುತ್ತದೆ.[೫] "ಪಿಣ್ಣಾಣಜಿಲರ ಕುಮಾರ ಕಾಮಿರಾಯನು" ಎಂದು ಉಕ್ತವಾಗಿದೆ. ಅನಂತರ ಕ್ರಿ. ಶ೧೫೩೭ರಲ್ಲಿ ದೊರೆಯಾಗಿದ್ದ ಸಾಳುವ ಪಾಂಡ್ಯಪ್ಪ ದೇವರಸನನ್ನು ಇನ್ನೊಂದು ಶಾಸನವು ಹೆಸರಿಸುತ್ತದೆ. "ಅರುವ ರಾಜ್ಯವನಾಳ್ವ ಹೊನ್ನಮ್ಮ ದೇವಿಯರ ಕುಮಾರ ಮಾಂಡಳಿಕ ಸೋಮನಾಥ...ಸಾಳ್ವ ಪಾಂಡ್ಯದೇವರಸನಾದ ಅಜಿಲರು". ಎಂದು

ಆತನನ್ನು ಆ ಶಾಸನವು ಪರಿಚಯಿಸುವುದನ್ನು ಗಮನಿಸಬೇಕು. ಇವನ ಪ್ರಧಾನಿಯಾದ ಬಿನ್ನಾಣಿ ಬಳಿಯ ಆದ್ಯದೇವರಸ ಎನ್ನುವವನು ಏಣೂರಿನಲ್ಲಿ ಶಾಂತೀಶ್ವರನ ಚೈತ್ಯಾಲಯವನ್ನು ನಿರ್ಮಿಸಿ ದಾನ ನೀಡಿದಂತೆ ಅದರಲ್ಲಿ ಹೇಳಲಾಗಿದೆ. ಇವರು ಲಲಿತಾಕೀರ್ತಿ ಭಟ್ಟಾರಕರ ಶಿಷ್ಯರಾಗಿದ್ದರಲ್ಲದೇ, ಆಡಳಿತದಲ್ಲಿ ಇವರಿಗೆ ವೇಣೂರಿನಲ್ಲಿ ನೆಲೆಸಿದ್ದ ಹದಿನಾರು ಮಂದಿ ಸೆಟ್ಟಿಕಾಕರು, ಮುನ್ನೂರ ಅರವತ್ತಾರು ಮಂದಿ ಯೆಳಮೆಗಳು ಸಹಾಯಕರಾಗಿದ್ದಂತೆ ತಿಳಿದುಬರುತ್ತದೆ. ಮುಂದೆ ಈ ವಂಶದಲ್ಲಿ ಪ್ರಸಿದ್ಧನಾದ ಅರಸನೆಂದರೆ, ತಿಮ್ಮಣ್ಣಾಜಿಲ. ಇವನು ಚಾರುಕೀರ್ತಿಗಳ ಪ್ರಿಯಾಗ್ರ ಶಿಷ್ಯನಾಗಿದ್ದು ದಾನರಾಧೇಯ ಎಂಬ ಬಿರುದನ್ನು ಗಳಿಸಿದ್ದನು. ಕ್ರಿ. ಶ. ೧೬೦೪ ರಲ್ಲಿ ವೇಣೂರಿನಲ್ಲಿ ಗೊಮಟೇಶ್ವರನ ಪ್ರತಿಮೆಯನ್ನು ಸ್ಥಾಪಿಸಿದ ಕೀರ್ತಿ ಇವನದು. ಇವನಿಗೆ ಇಬ್ಬರು ರಾಣಿಯರು. ಇಬ್ಬರೂ ಪ್ರತ್ಯೇಕವಾಗಿ ಗೊಮಟೇಶ್ವರನ ಎದುರು ಎರಡು ಬಸದಿಗಳನ್ನು ನಿರ್ಮಿಸಿದಂತೆ ತಿಳಿದುಬರುತ್ತದೆ. ಮೊದಲನೆಯ ರಾಣಿಯಾದ ಪಾಂಡ್ಯಕ್ಕದೇವಿ ಅಥವಾ ವರ್ಧಮಾನಕ್ಕೆ ಎನ್ನುವವಳು ಗೊಮ್ಮಟನ ಎದುರು ಎಡಭಾಗದಲ್ಲಿ ಚಂದ್ರನಾಥನ ಬಸದಿಯನ್ನು ನಿರ್ಮಿಸಿದರೆ, ಇನ್ನೊಬ್ಬ ರಾಣಿಯಾದ ಪಾರ್ಶ್ವದೇವಿ ಅಥವಾ ಬಿನ್ನಾಣಿ ಎನ್ನುವವಳು, ಗೊಮ್ಮಟನ ಬಲಭಾಗದಲ್ಲಿ ಶಾಂತಿನಾಥನ ಬಸದಿಯೊಂದನ್ನು ನಿರ್ಮಿಸಿದಳು. ಆ ತರುವಾಯ ಮಧುರಕ್ಕ ದೇವಿ ಎನ್ನುವವಳು ಪೂಂಜಳಿಕೆಯ ರಾಜ್ಯವನ್ನು ಪಾಲಿಸಿದಂತೆ ಕಂಡುಬರುತ್ತದೆ. ಕ್ರಿ. ಶ. ೧೬೨೧ ರ ಶಾಸನವು ಆಕೆಯನ್ನು "ಮಧುರಕ್ಕದೇವಿಯರಾದ ಅಮ್ಮಾಜಿಯವರು" ಎಂದು ಹೆಸರಿಸುತ್ತದೆ. ಈಕೆ ಲಲಿತಕೀರ್ತಿ ಭಟ್ಟಾರಕರ ಪ್ರಿಯಾಗ್ರ ಶಿಷ್ಯೆಯಾಗಿದ್ದು, ವೇಣೂರಿನ ಶಾಂತೀಶ್ವರನ ಬಸದಿಗೆ ದಾನ ನೀಡಿದ್ದಾಳೆ. ಇವಳು ತನ್ನ ರಾಜಧಾನಿಯಾದ ಅಳದಂಗಡಿಯಲ್ಲಿ ಒಂದು ಅರಮನೆಯನ್ನು ಕಟ್ಟಿಸಿದ್ದಳಲ್ಲದೇ, ಜೈನಬಸದಿಯನ್ನೂ ಅರ್ಧನಾರೀಶ್ವರನ ಮತ್ತು ಸೋಮನಾಥ ದೇವಾಲಯಗಳನ್ನು ನಿರ್ಮಿಸಿದಳು. ಅನಂತರ ಆಡಳಿತ ನಡೆಸಿದ ಶಂತರದೇವಿ ಅಜಿಲ (೧೬೮೦-೧೭೨೫) ತಿಮ್ಮಣ್ಣರಸ ಅಜಿಲರ (೧೭೨೫-೧೭೫೫) ಉಲ್ಲೇಖವನ್ನು ಡಾ। ಪಿ. ಎನ್. ನರಸಿಂಹಮೂರ್ತಿಯವರು ತಮ್ಮ ಲೇಖನದಲ್ಲಿ ಪ್ರಸ್ತಾವಿಸಿದ್ದಾರೆ. ಅನಂತರ ಈ ವಂಶದ ಕುರಿತು ಹೆಚ್ಚಿನ ದಾಖಲೆಗಳು ದೊರೆಯುವುದಿಲ್ಲ. ಪೋರ್ಚುಗೀಸ್ ದಾಖಲೆಗಳಲ್ಲಿ ಉಕ್ತವಾಗಿರುವಂತೆ, ಕ್ರಿ. ಶ. ೧೬೭೯ ರ ಸುಮಾರಿಗೆ ಇವರು ಕೆಳದಿ ದೊರೆಗಳ ವಿರುದ್ಧ ಹೋರಾಟ ನಡೆಸಬೇಕಾಗಿ ಬಂದದ್ದರಿಂದ, ಯುದ್ಧದಲ್ಲಿ ಸೋತು ತಮ್ಮ ರಾಜ್ಯವನ್ನು ಕಳೆದುಕೊಳ್ಳಬೇಕಾಯಿತು. ಅನಂತರ ಹಾಗೂ ಹೀಗೂ ಜೀವ ಹಿಡಿದುಕೊಂಡಿದ್ದ ಈ ಅರಸು ಮನೆತನದವರನ್ನು ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರು ಸಂಪೂರ್ಣವಾಗಿ ನಾಶಪಡಿಸಿದರು. ಅಜಿಲ ಅರಸರ ಮನೆಯಲ್ಲಿರುವ ದಾಖಲೆಯೊಂದರಲ್ಲಿ ಇತ್ತೀಚೆಗೆ ಆಡಳಿತ ನಡೆಸಿರುವ ಕೆಲವರ ಹೆಸರುಗಳು ಕಂಡುಬರುತ್ತದೆ. ಅವರಲ್ಲಿ ಪದ್ಮರಾಜ ಅಜಿಲ (೧೮೮೭-೧೯೦೫), ಹರಿಶ್ಚಂದ್ರ ಅಜಿಲ (೧೯೬೦-೧೯೯೫) ಈಗ ಪದ್ಮಪ್ರಸಾದ್ ಅಜಿಲರು ೧೯೯೫-೯೬ ರಲ್ಲಿ ಪಟ್ಟಕ್ಕೆ ಬಂದಿದ್ದಾರೆ. ಇಲ್ಲಿ ಇಂದಿಗೂ ಪಟ್ಟಾಭಿಷೇಕ, ಅರಮನೆಯ ಆಚರಣಾ ಪದ್ಧತಿಗಳು, ಹಿಂದಿನ ತಲೆಮಾರಿನವರು ನಡೆಸುತ್ತಿರುವ ರೀತಿಯಲ್ಲಿಯೇ ಸಾಧ್ಯವಾಗುವಮಟ್ಟಿಗೆ ನಡೆಸಿಕೊಂಡು ಬರುತ್ತಿದ್ದಾರೆ. ಭೂತಾರಾಧನೆ, ಹೊಸತೆನೆ ತರುವುದು, ಹೊಸ ಅಕ್ಕಿ ಊಟ, ದೇವಸ್ಥಾನದಲ್ಲಿ ನಡೆಯುವ ಜಾತ್ರೆ

ಉತ್ಸವಗಳು, ಜಿನ ಚೈತ್ಯಾಲಯಗಳಲ್ಲಿ ನಡೆಯುವ ಪೂಜಾ ವಿಧಿ ವಿಧಾನಗಳು ಇಂದಿಗೂ ಜೀವಂತವಾಗಿರುವುದನ್ನು ನಾವು ಗಮನಿಸಬಹುದು.



ಪಂಚಲೋಹದ ಬಾಹುಬಲಿ

ಬಾಹುಬಲಿ ಮಹಾಮಸ್ತಕಾಭಿಷೇಕವು ೧೨ ವರ್ಷಗಳಿಗೊಮ್ಮೆ ನಡೆಯುವ ಆಚರಣೆಯಾಗಿದ್ದು, ಹೆಚ್ಚು ವೆಚ್ಚ ಭರಿಸಬೇಕಾಗಿರುವುದರಿಂದ ಸಾರ್ವಜನಿಕರು, ದಾನಿಗಳು, ಬಾಹುಬಲಿಯ ಭಕ್ತಾದಿಗಳು ಎಲ್ಲರೂ ಒಟ್ಟಿಗೆ ಸೇರಿಯೇ ಕಾರ್ಯನಿರ್ವಹಿಸುತ್ತಾರೆ. ತಿಮ್ಮಣ್ಣ ಅಜಿಲರಿಂದ ೧೬೦೪ ರಲ್ಲಿ ಪಂಚಲೋಹದ ಬಾಹುಬಲಿಯ ಸಣ್ಣ ಬಿಂಬ ಕೂಡ ನಿರ್ಮಾಣವಾಯಿತು. ಈ ಬಿಂಬಕ್ಕೆ ದಿನಾಲೂ ಪೂಜಾ ಕಾರ್ಯಗಳು ಇಂದಿಗೂ ನಡೆಯುತ್ತಾ ಇರುವುದನ್ನು ನಾವು ಗಮನಿಸಬಹುದು.

## ಧರ್ಮಸ್ಥಳದ ಗೊಮ್ಮಟೇಶ್ವರ

ನಮ್ಮ ಕಾಲದಲ್ಲಿ ಇನ್ನೊಂದು ಗೊಮ್ಮಟೇಶ್ವರನ ವಿಗ್ರಹವು ನಿರ್ಮಾಣವಾಗಿರುವುದು, ಚಾರಿತ್ರಿಕ ಮಹತ್ವವುಳ್ಳ ಘಟನೆ ಧರ್ಮಸ್ಥಳ ಕ್ಷೇತ್ರದ ಬಾಹುಬಲಿ ಮೂರ್ತಿಯ ನಿರ್ಮಾಣಕಾರ್ಯ ೧೯೬೭ರಲ್ಲಿ ಆರಂಭಗೊಂಡು೧೯೭೩ರಲ್ಲಿ ಪೂರ್ಣವಾಯಿತು .ಈಗಿನ ಧರ್ಮಾಧಿಕಾರಿಗಳಾಗಿರುವ ಶ್ರೀ ವೀರೇಂದ್ರ ಹೆಗ್ಗಡೆಯವರು ೧೯೮೨ ಫೆಬ್ರವರಿ ೩ ಮತ್ತು೪ ರಂದು ಪ್ರತಿಷ್ಠಾಪಿಸಿ ಮಹಾಮಸ್ತಕಾಭಿಷೇಕವನ್ನು ನಡೆಸಿದರು. [೪]



ಈ ಹಿಂದೆ ಕಾರ್ಕಳ ಮತ್ತು ವೇಣೂರಿನಲ್ಲಿ ನಡೆದ ಬಾಹುಬಲಿ ಮಹಾಮಸ್ತಕಾಭಿಷೇಕಗಳಲ್ಲಿ ಹೆಗ್ಗಡೆ ಕುಟುಂಬ ದವರು ಪಾಲ್ಗೊಂಡು ,ಮಾರ್ಗದರ್ಶನ ನೀಡಿದ್ದರು. ವಿವಿಧ ದ್ರವ್ಯಗಳಿಂದ ಅಭಿಷೇಕ ನಡೆದಾಗ ಅದರಿಂದ ಪುಳಕಿತ ಗೊಂಡು ಪ್ರಭಾವಿತರಾದ ಹೆಗ್ಗಡೆ ಮನೆತನದವರು ಶ್ರೀ ಕ್ಷೇತ್ರದಲ್ಲಿ ಪ್ರಭಾವಿತರಾದ ಹೆಗ್ಗಡೆ ಮನೆತನದವರು ಶ್ರೀ ಕ್ಷೇತ್ರದಲ್ಲಿ ಬಾಹುಬಲಿಯ ಮೂರ್ತಿಯನ್ನು ಏಕೆ ಸ್ಥಾಪಿಸಬಾರದು? ಎಂದು ಯೋಚಿಸಿದರು. ಅದರ ಪ್ರಕಾರ ಕಾರ್ಕಳದ ಹತ್ತಿರದ ಮಂಗಳಪಾದೆ ಎಂಬಲ್ಲಿಗೆ ಹೋಗಿ ಅಲ್ಲಿ ಏಕಶಿಲೆಯ ಅನ್ವೇಷಣೆ ನಡೆಸಿ, ಕೆತ್ತನೆಯ ಶಿಲ್ಪಿ, ರಾಜ್ಯ ಪ್ರಶಸ್ತಿ ವಿಜೇತ , ರೆಂಜಾಳ ಗೋಪಾಲಕೃಷ್ಣ ಶೆಣೈಯವರಿಂದ ಬಾಹುಬಲಿಯ ಸುಂದರವಾದ ಮೂರ್ತಿಯನ್ನು ನಿರ್ಮಾಣ ಮಾಡಿಸಿದರು.[೪]

ಇದರ ಒಟ್ಟು ಎತ್ತರ ೫೨ ಅಡಿಗಳು. ಇದರಲ್ಲಿ ೬ ಅಡಿ ಭೂಮಿ ಒಳಗಡೆಗೆ ಇಳಿದಿರುವ ಬೇರು. ಅದರ ಮೇಲೆ ೭ ಅಡಿ ವಿಗ್ರಹ ಪೀಠಭಾಗ. ಇದರ ಮೇಲೆ ಅಂಗುಷ್ಠದಿಂದ ನೆತ್ತಿಯವರೆಗೆ ೩೯ ಅಡಿಗಳು. ಮಂಗಳಪಾದೆಯಿಂದ ಧರ್ಮಸ್ಥಳಕ್ಕೆ ೮೦ಕಿಲೋ ಮೀಟರ್ ದೂರದ ಅಂತರವಿದ್ದು, ವಿಶೇಷವಾಗಿ ತಯಾರಿಸಿದ ಟ್ರಾಲಿಯಲ್ಲಿ ಧರ್ಮಸ್ಥಳಕ್ಕೆ ಮೂರ್ತಿಯನ್ನು ಸಾಗಿಸಿದ್ದಾರೆ.

ಈ ವಿಗ್ರಹದಲ್ಲಿ ಕೆಲವು ವಿಶೇಷಗಳಿವೆ. ಎರಡೂ ಪಾದದ ಬಳಿ ಹರಿದಾಡುವ ಸರ್ಪಗಳನ್ನು ತೋರಿಸಿದ್ದಾರೆ. ವಿಗ್ರಹದ ಪಾದ, ತೋಳು. ತೊಡೆಗಳನ್ನು ಬಳಸಿದ ಮಾಧವೀಲತೆ ಇದರಲ್ಲಿ ಅರಳಿದ ಹೂವುಗಳು, ಪಾದದ ಬಳಿಯಿರುವ ಎರಡು ಪ್ರತ್ಯೇಕ ಶಿಲೆಯಲ್ಲಿ ಮಾವಿನ ಮರ, ಗಿಳಿ, ಮಂಗ, ಜೇನುಗೂಡಿನ ಆಕರ್ಷಕವಾದ ಕೆತ್ತನೆಗಳು, ಪಾದದ ಬಳಿಯಲ್ಲಿ ಎರಡು ಆನೆಗಳು ತಮ್ಮ ಸೊಂಡಿಲಿನಿಂದ ಪಾದವನ್ನು ಸ್ಪರ್ಶಿಸುತ್ತದೆ. ೪ ಇಕ್ಕೆಲಗಳಲ್ಲಿ ಇಬ್ಬರು ದೇವಸ್ತ್ರೀಯರು ನಿಂತುಕೊಂಡು ಕೇವಲ ಜ್ಞಾನಿಯಾದ ಬಾಹುಬಲಿಯನ್ನು ಗೌರವಿಸುತ್ತಿರುವಂತೆ ತೋರಿಸಲಾಗಿದೆ. ಗುಂಗುರು ತಲೆಗೂದಲು, ಧೀರೋದಾತ್ತನಾದ ಗೊಮ್ಮಟೇಶನ ವ್ಯಕ್ತಿತ್ವವನ್ನು ಸುಂದರವಾಗಿ ತೆರೆಹಿಡಿದಿದೆ. ಜೈನ ಬಸದಿಗಳಲ್ಲಿ ಗೊಮ್ಮಟೇಶ್ವರನ ಲೋಹದ ಬಿಂಬಗಳೂ ಕೂಡ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತದೆ. ಧರ್ಮಸ್ಥಳದ ಚಂದ್ರನಾಥ ಬಸದಿಯ ಮೇಲಿನ ನೆಲೆಯಲ್ಲಿ ವಿಜಯನಗರ ಕಾಲಕ್ಕೆ ಸೇರುವ ಸುಂದರವಾದ ಕಂಚಿನ ಬಾಹುಬಲಿಯ ಶಿಲ್ಪವಿದೆ. ಗಂಗರ ಕಾಲಕ್ಕೆ ಸೇರಿದ ಅತ್ಯಂತ ಸುಂದರವಾದ ವಿಗ್ರಹವೊಂದನ್ನು ಡಾ। ಗುರುರಾಜ ಭಟ್ಟರು ಸವಣೂರಿನ ಬಸದಿಯಲ್ಲಿ ಗುರುತಿಸಿದ್ದಾರೆ. ಬಂಗವಾಡಿಯ ಶಾಂತಿನಾಥ ಬಸ್ತಿಯಲ್ಲಿ ಎರಡು ಲೋಹದ ವಿಗ್ರಹಗಳಿವೆ. ಇವುಗಳಲ್ಲಿ ಒಂದನ್ನು ಅಲ್ಲಿ ಆಳ್ವಿಕೆ ನಡೆಸಿದ ಕಾಮಿರಾಯ ಬಂಗನು, ಕ್ರಿ. ಶ ೧೪೪೬ರಲ್ಲಿ ನಿರ್ಮಿಸಿದಂತೆ ಆ ವಿಗ್ರಹದ ಪೀಠದ ಹಿಂಭಾಗದಲ್ಲಿ ಬರೆದ ಶಾಸನದಲ್ಲಿ ಹೇಳಲಾಗಿದೆ. ಇದರ ಕಾಲ ಬುಡದಲ್ಲಿ ಕುಕ್ಕುಟ ಸರ್ಪವನ್ನು ತೋರಿಸಿದ್ದಾರೆ. ಅಗಲವಾದ ಮುಖಭಾವ, ಸುತ್ತುವರಿದ ಮಾಧವೀಲತೆ ಇವೆಲ್ಲವೂ ಶ್ರವಣಬೆಳಗೊಳದ ಗೊಮ್ಮಟೇಶ್ವರನ ಪ್ರತಿರೂಪದಂತೆ ಕಂಡುಬರುತ್ತದೆ. ಇನ್ನೊಂದು ವಿಗ್ರಹವೂ ಕೂಡ ಇದೇ ಮಾದರಿಯಲ್ಲಿದೆ. ಮುತ್ತಿನಿಂದ ಮಾಡಿದ ಅತ್ಯಂತ ಸುಂದರವಾದ ಬಾಹುಬಲಿಯ ವಿಗ್ರಹವೊಂದು ಮೂಡಬಿದಿರೆಯ ಗುರುಗಳ ಬಸದಿಯ ಸಿದ್ಧಾಂತದಲ್ಲಿದೆ. ಇಂಥ ವಿಗ್ರಹವು ಬೇರೆ ಎಲ್ಲಿಯೂ ಕಂಡುಬಂದಿಲ್ಲ. ಈ ಅಂಶವನ್ನೂ ಕೂಡ ತುಳುನಾಡಿನ ಶಿಲ್ಪಕಲೆಯ ವೈಶಿಷ್ಟ್ಯವೆಂದು ಗುರುತಿಸಬಹುದು.[೪]

## ಚಾರಿತ್ರಿಕ ಹಿನ್ನೆಲೆ

ಶ್ರೀ ಕ್ಷೇತ್ರ ಧರ್ಮಸ್ಥಳವು ಸಮಾಜದ ಎಲ್ಲಾ ಜನರಿಂದ ಗೌರವಾದರಗಳಿಗೆ ಪಾತ್ರವಾದ ಕ್ಷೇತ್ರಗಳಲ್ಲೊಂದು ಎಂಬುದು ವಿದಿತವಾಗುತ್ತದೆ. ಇದು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನಲ್ಲಿದೆ. ಇಲ್ಲಿಗೆ ಬರಲು ಪಶ್ಚಿಮ ಘಟ್ಟಗಳ ಚಾರ್ಮಾಡಿ ಅಥವಾ ಶಿರಾಡಿ ಘಾಟಿಯಿಂದಾಗಿ ಇಲ್ಲವೇ ಶಿರಾಡಿ ಅಥವಾ

ಚಾರ್ಮಾಡಿ ಘಾಟಿಯಿಂದಾಗಿ ಇಲ್ಲವೇ ಬೆಳ್ತಂಗಡಿ - ಉಜಿರೆ ಮಾರ್ಗವಾಗಿ ಪ್ರಯಾಣಿಸಬಹುದು. ಕರ್ನಾಟಕದ ಎಲ್ಲಾ ಭಾಗಗಳಿಂದಲೂ ಇಲ್ಲಿಗೆ ನೇರ ವಾಹನಗಳ ಸೌಕರ್ಯವಿದೆ. ಅತಿ ಹತ್ತಿರದ ರೈಲು ಹಾಗೂ ವಿಮಾನ ನಿಲ್ದಾಣಗಳು ಮಂಗಳೂರಿನಲ್ಲಿವೆ.

ಹಿಂದೆ ಧರ್ಮಸ್ಥಳವು 'ಕುಡುಮ' ಎಂದು ಪ್ರಸಿದ್ಧಿವಾಗಿತ್ತು. ಲಭ್ಯವಿರುವ ಮಾಹಿತಿಯಂತೆ ಇಲ್ಲಿನ ಆಳರಸರಾದ ನೆಲ್ಯಾಡಿ ಬೀಡಿನ ಹೆಗ್ಗಡೆ ಮನೆತನದವರು ಇಲ್ಲಿ ದಾನ - ಧರ್ಮಾದಿಗಳನ್ನು ಯಥೇಚ್ಛವಾಗಿ ನಡೆಸಿಕೊಂಡು ಬರುತ್ತಿದ್ದರಲ್ಲದೆ, ಜಾತಿ, ಮತ, ಪಂಥಗಳ ಭೇದವಿಲ್ಲದೆ ಎಲ್ಲರನ್ನೂ ಆದರಿಸಿ, ಸತ್ಕರಿಸುತ್ತಿದ್ದರು. ಈ ಸತ್ಸಂಪ್ರದಾಯದಿಂದಾಗಿ ಇದು 'ಕುಡುಮ' ಎಂದರೆ ದಾನ - ಧರ್ಮಾದಿಗಳು ನಡೆಯುವ ಸ್ಥಳ ಎಂದು ಪ್ರಸಿದ್ಧಿ ಪಡೆದಿತ್ತು.[೨೫]

ಸುಮಾರು ೬ ಶತಮಾನಗಳ ಹಿಂದೆ ಇಲ್ಲಿ ಬರ್ಮಣ್ಣ ಪೆರ್ಗಡೆ ಎಂಬವರು ಅಧಿಕಾರ ನಡೆಸುತ್ತಿದ್ದರು. ಅವರ ಧರ್ಮಪತ್ನಿ ಅಮ್ಮುದೇವಿ ಬಳ್ಳಾಲ್ತಿ. ಇವರು ಜೈನ ಮತಾವಲಂಬಿಗಳಾದ್ದರಿಂದ ನೆಲ್ಯಾಡಿ ಬೀಡಿನ ಪಕ್ಕದಲ್ಲಿ ಎತ್ತರವಾದ ಸ್ಥಳದಲ್ಲಿ ಭಗವಾನ್ ಶ್ರೀ ಚಂದ್ರನಾಥ ಸ್ವಾಮಿಯ ಬಸದಿ ಇತ್ತು. ಅನ್ಯೋನ್ಯ ದಾಂಪತ್ಯ ನಡೆಸುತ್ತಿದ್ದ ಪೆರ್ಗಡೆ ದಂಪತಿಗಳು ಜೈನ ಧರ್ಮದ ಮೂಲ ತತ್ವಗಳಾದ ಅಹಿಂಸೆ, ಅಪರಿಗ್ರಹ, ಅಚೌರ್ಯ ಮುಂತಾದವುಗಳಲ್ಲಿ ಅನನ್ಯ ಭಕ್ತಿ-ಶ್ರದ್ಧೆ ನಂಬಿಕೆ ಇಟ್ಟು, ಅದನ್ನೇ ಅವರ ನಡೆ ನುಡಿಗಳಲ್ಲಿ ಅನುಸರಿಸಿಕೊಂಡು ಬರುತ್ತಿದ್ದರು. ಇವರು ಅತ್ಯಂತ ಭಕ್ತಿ-ಶ್ರದ್ಧೆಗಳಿಂದ ಧರ್ಮದ ಆಚರಣೆಗಳನ್ನು ಪಾಲಿಸುತ್ತಾ ಎಲ್ಲರ ಆದರಾಭಿಮಾನಕ್ಕೆ ಪಾತ್ರರಾಗಿದ್ದರು.

ನೆಲ್ಯಾಡಿ ಬೀಡಿಗೆ ಬಂದವರನ್ನೆಲ್ಲಾ ಯಾವುದೇ ಭೇದ - ಭಾವವಿಲ್ಲದೆ ಅತಿಥಿಗಳಂತೆ ಸ್ವಾಗತಿಸಿ, ಸತ್ಕರಿಸಿ ಕಳುಹಿಸುವ ಸತ್ಪರಂಪರೆಯನ್ನು ಅವರು ಬೆಳೆಸಿದರು. ಮೇಲಾಗಿ ಅಸಹಾಯಕರಾಗಿ ಬಂದವರಿಗೆ ಸಾಂತ್ವನದ ಮಾತುಗಳನ್ನು ಹೇಳಿ, ಅವರಿಗೆ ಸಾಧ್ಯವಾದಷ್ಟು ಉಪಚಾರಾದಿ ನೆರವು ನೀಡಿ ಕಳುಹಿಸುತ್ತಿದ್ದರು. ಹೀಗೆ ಕುಡುಮದ ನೆಲ್ಯಾಡಿ ಬೀಡು ಅನ್ನದಾನ, ವಿದ್ಯಾದಾನ, ಅಭಯದಾನ, ಔಷಧಿದಾನ ಮುಂತಾದವುಗಳಿಂದಾಗಿ ಖ್ಯಾತಿ ಗಳಿಸಿತ್ತು.

ಧರ್ಮಕಾರ್ಯಗಳನ್ನು ಯಥವತ್ತಾಗಿ ಹಾಗೂ ಅನೂಚಾನವಾಗಿ ನಡೆಸುತ್ತಿರುವ ತಾಣಗಳನ್ನು ಅರಸುತ್ತಾ ಧರ್ಮದೇವತೆಗಳನ್ನು ಒಂದು ದಿನ ಭೂಮಿಗೆ ಇಳಿದು ಬಂದರೆಂಬುದು ಐತಿಹ್ಯ. ಹಾಗೆ ಬಂದವರನ್ನು ಮಲ್ಲರ್ ಮಾಡಿ ಗ್ರಾಮದ ನೆಲ್ಯಾಡಿ ಬೀಡು ಆಕರ್ಷಿಸಿತು. ಒಡನೆಯೇ ಆ ಧರ್ಮದೇವತೆಗಳು ಮಾನವ ರೂಪ ತಾಳಿ ಪೆರ್ಗಡೆ ದಂಪತಿಗಳ ಬಳಿಗೆ ಹೋಗಿ ಆತಿಥ್ಯ ನೀಡುವಂತೆ ವಿನಂತಿಸಿದರು. ತಮ್ಮ ದೈನಂದಿನ ನಿಯಮದಂತೆ ಪೆರ್ಗಡೆ ದಂಪತಿಗಳು ಸಂತೋಷಭರಿತವಾಗಿ ಅವರನ್ನು ಆದರಾಭಿಮಾನಗಳಿಂದ ಸತ್ಕರಿಸಿದರು. ವಿಶೇಷ ಪ್ರಭೆಯಿಂದ ಕಂಗೊಳಿಸುತ್ತಿರುವ ಈ ಆಗುಂತರ ಬಗ್ಗೆ ಅವರಿಗೆ ಕುತೂಹಲವು, ಆನಂದವೂ ಆಗಿತ್ತು. ಅವರನ್ನು ಸಂಪ್ರೀತಿಗೊಳಿಸಿದ ಸಂತೃಪ್ತಿಯಿಂದ ಪೆರ್ಗಡೆ ದಂಪತಿಗಳು ಸುಖ ನಿದ್ರೆ ಮಾಡಿದರು.

ನಿದ್ರೆಯಲ್ಲಿ ಅವರಿಗೆ ಕನಸೊಂದು ಬಿತ್ತು. ಆಗಂತುಕರಾಗಿ ಬಂದ ಧರ್ಮದೇವತೆಗಳು ಪ್ರತ್ಯಕ್ಷವಾಗಿ, "ಅತಿಥಿಗಳಾಗಿ ಬಂದ ನಾವು ಸಾಮಾನ್ಯ ಮನುಷ್ಯರಲ್ಲ, ಧರ್ಮದೇವತೆಗಳು. ನೀವು ನಿಮ್ಮ ಧರ್ಮಾಚರಣೆಯನ್ನು

ಇದೇ ರೀತಿ ವಿಧಿವತ್ತಾಗಿ ಮುಂದುವರೆಸಿಕೊಂಡು ಹೋಗುವಿರಾದಲ್ಲಿ ನಾವು ಇಲ್ಲಿಯೇ ನಿಂತು ನಿಮಗೂ, ನಿಮ್ಮ ಮುಂದಿನ ತಲೆಮಾರಿಗೂ ಮಾರ್ಗದರ್ಶನ, ರಕ್ಷಣೆ ನೀಡಲು ಬಯಸಿದ್ದೇವೆ" ಎಂದು ಹೇಳಿ ಅದೃಶ್ಯರಾದರು. ಆನಂದ ಮತ್ತು ಕುತೂಹಲದಿಂದ ಪೆರ್ಗಡೆ ದಂಪತಿಗಳು ಎಚ್ಚೆತ್ತು ನೋಡಿದಾಗ ನೋಡಿದಾಗ ಅತಿಥಿಗಳು ಕಾಣಿಸಲಿಲ್ಲ. ಬದಲಾಗಿ ಧರ್ಮದೇವತೆಗಳು ಬಳಸುವ ಆಯುಧಗಳು ಮಾತ್ರ ಅಲ್ಲಿದ್ದವು. ಪುಳಕಿತಗೊಂಡ ಪೆರ್ಗಡೆ ದಂಪತಿಗಳು ಭಕ್ತಿ - ಶ್ರದ್ಧೆಯಿಂದ ಧರ್ಮದೇವತೆಗಳಿಗೆ ಮನದಲ್ಲೇ ವಂದಿಸಿ ಅವರು ಬಿಟ್ಟು ಹೋದ ಆಯುಧಗಳನ್ನು ಬೀಡಿನ ಪ್ರಶಸ್ತ ಸ್ಥಳದಲ್ಲಿಟ್ಟು ಪೂಜಿಸಿದರು.

ನಂತರ ಪೆರ್ಗಡೆ ದಂಪತಿಗಳು ನೆಲ್ಯಾಡಿ ಬೀಡನ್ನು ಅವರ ಆವಾಸಕ್ಕಾಗಿ ಬಿಟ್ಟುಕೊಟ್ಟು ಹತ್ತಿರದಲ್ಲೇ ಬೇರೆಯೇ ಬೀಡನ್ನು ಕಟ್ಟಿಸಿಕೊಂಡರು. ನೆಲ್ಯಾಡಿ ಬೀಡಿನಲ್ಲಿ ಧರ್ಮದೇವತೆಗಳ ಸನ್ನಿಧಾನದ ಸಂಕೇತವಾಗಿ ತೂಗು ಮಂಚವನ್ನಿಟ್ಟು, ದೀಪ ಹಚ್ಚಿ, ಧೂಪಾದಿಗಳಿಂದ ಆರಾಧಿಸುತ್ತಾ ಬಂದರು. ಹಾಗೂ ಅವರ ಆದೇಶದಂತೆ ಧರ್ಮಕಾರ್ಯಗಳನ್ನೂ, ಬೀಡಿನ ಪರಂಪರೆಯ ಸತ್ಸಂಪ್ರದಾಯಗಳನ್ನೂ ಅನೂಚಾನವಾಗಿ ಪಾಲಿಸುವುದಾಗಿ ನಿರ್ಧಾರ ಕೈಗೊಂಡರು. ನೆಲ್ಯಾಡಿ ಬೀಡಿನಲ್ಲಿ ಧರ್ಮದೇವತೆಗಳನ್ನು ಪೂಜಿಸುವ ಈ ಸಂಪ್ರದಾಯವು ಅನೂಚಾನವಾಗಿ ನಡೆದುಕೊಂಡು ಬಂದಿದೆ.[೧೫]

"ಕೆಲವು ಕಾಲದ ನಂತರ ಧರ್ಮದೇವತೆಗಳು ಪೆರ್ಗಡೆ ದಂಪತಿಗಳಿಗೆ ಪುನಃ ಕನಸಿನಲ್ಲಿ ಕಾಣಿಸಿಕೊಂಡು" ಓ ಪೆರ್ಗಡೆ ನಾವು ನಾಲ್ವರು ಶಕ್ತಿ ಶಾಲಿ ದೈವಗಳು - ಕಾರ್ಲಕಾಯಿ, ಕಾಳರಾಹು, ಕುಮಾರಸ್ವಾಮಿ ಮತ್ತು ಕನ್ಯಾಕುಮಾರಿ ಎಂದು ನಮ್ಮ ಹೆಸರು. ನಾವು ತೋರಿಸಿದ ಸ್ಥಳದಲ್ಲಿ ನಮಗೆ ಪ್ರತ್ಯೇಕ ಗುಡಿಗಳನ್ನು ಕಟ್ಟಿಸಿರಿ. ಉತ್ತಮ ಕುಲದ ಹಾಗೂ ನಿಯಮ ನಿಷ್ಠಾಚಾರಿಗಳಾದ ಪಾತ್ರಿಗಳನ್ನು ನೇಮಿಸಿರಿ. ಇನ್ನು ಮುಂದಕ್ಕೆ ನಾವು ಅವರ ಮೂಲಕ ನಿಮಗೆ ಆಗಾಗ ಸೂಕ್ತ ಆದೇಶಗಳನ್ನು ಕೊಡುತ್ತಾ ಇರುತ್ತೇವೆ. ಅಲ್ಲದೆ ನಮ್ಮ ದೂತನಾದ ಅಣ್ಣಪ್ಪ ಸ್ವಾಮಿಗೆ ನಮ್ಮ ಆದೇಶಗಳನ್ನು ಕಾರ್ಯಗತಗೊಳಿಸುವಲ್ಲಿ ನಿಮಗೆ ಸಹಕರಿಸುವಂತೆ ಆಜ್ಞಾಪಿಸುತ್ತೇವೆ. ಧರ್ಮಕಾರ್ಯಗಳಿಗೆ ಯಾವ ಅಡ್ಡಿ - ಆತಂಕಗಳೂ ಬಾರದಂತೆ ಅಣ್ಣಪ್ಪ ಸ್ವಾಮಿ ನೋಡಿಕೊಳ್ಳುತ್ತಾನೆ. ನೀವು ಕಾಲಕಾಲಕ್ಕೆ ಸರಿಯಾಗಿ ನೇಮ-ನಡಾವಳಿಗಳಿಗೆ ಲೋಪವಾಗದಂತೆ ಕಾರ್ಯನಿರ್ವಹಿಸತಕ್ಕದ್ದು. ಇದಕ್ಕಾಗಿ ನಿಮ್ಮೊಂದಿಗೆ ಸಹಕರಿಸಲು ಉತ್ತಮ ಕುಲದ ನಾಲ್ಕು ಮಂದಿಯನ್ನು ನಿಯಮಿಸಿರಿ. ನಮ್ಮನ್ನು ಆರಾಧಿಸುತ್ತಾ, ನಿಮ್ಮ ಆರೋಗ್ಯ, ಸಂಪತ್ತನ್ನು ಹೆಚ್ಚಿಸಿಕೊಡುವೆವು. ಸ್ಥಳದ ಕೀರ್ತಿ ನಾಡಿನಾದ್ಯಂತ ಹರಡುವಂತೆ ಮಾಡುವೆವು. ಎಲ್ಲೆಲ್ಲಿಂದಲೂ ಕಾಣಿಕೆ ಗಳು ಬರುವಂತೆ ಮಾಡುವೆವು. ನಿಮ್ಮ ಮಾತುಗಳನ್ನು ನಿಜ ಮಾಡಿಸಿಕೊಟ್ಟು ನಿಮ್ಮ ಸಕಲ ಕಾರ್ಯಗಳಿಗೂ ಜಯವನ್ನು ಒದಗಿಸಿಕೊಡುವೆವು. ಈ ಕ್ಷೇತ್ರಕ್ಕೆ ಬರುವ ಭಕ್ತರಿಗೆ ಆಹಾರ - ವಸತಿಗಳನ್ನು ಕೊಟ್ಟು ಧರ್ಮಕ್ಕೆ ಲೋಪ ಬಾರದಂತೆ ನಡೆಯಿರಿ. ಎಲ್ಲರೂ ಸಮಾನ ರೀತಿಯ ದಾನ - ಧರ್ಮಗಳು ನಡೆಯಲಿ. ಹೀಗೆ ನಡೆದಲ್ಲಿ ನಿಮ್ಮ ಹೆತ್ತ ತಾಯಿಯಂತೆ ಸಲಹುವೆವು. ತಪ್ಪಿ ನಡೆದಲ್ಲಿ ತೊಂದರೆಯಾದೀತು. ಆದರೆ ಯಾವುದಕ್ಕೂ ಹೆದರುವ ಕಾರಣವಿಲ್ಲ" ಎಂದು

ಭರವಸೆಯಿತ್ತು ಆಶೀರ್ವದಿಸಿ, ಅದೃಶ್ಯರಾದರು.

ಮರುದಿನ ಬೆಳಿಗ್ಗೆ ಹೆಗ್ಗಡೆ ದಂಪತಿಗಳು ಈ ಕುರಿತು ಸಮಾಲೋಚಿಸಿ, ದೇವತೆಗಳು ಕನಸಿನಲ್ಲಿ ಸೂಚಿಸಿದ ಜಾಗವನ್ನು ಸಂದರ್ಶಿಸಿ, ಅಲ್ಲಿ ಧರ್ಮಾದೇವತೆಗಳ ಆದೇಶದ ಮೇರೆಗೆ ಬೇರೆ ಬೇರೆ ಗುಡಿಗಳನ್ನು ಕಟ್ಟಿಸುವ ನಿರ್ಧಾರ ಮಾಡಿದರು. ಅದರಂತೆ ಈಗ 'ಬದಿನಡೆ' ಎಂದು ಕರೆಯಲ್ಪಡುವ ಬೆಟ್ಟದ ಮೇಲೆ ನಾಲ್ಕೂ ಧರ್ಮದೇವತೆಗಳಿಗೆ ಮತ್ತು ಅಣ್ಣಪ್ಪಸ್ವಾಮಿಗೆ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ ಪ್ರತಿಷ್ಠಾಪಿಸಿದರು. ನಿಯಮಿತವಾಗಿ ಧರ್ಮದೇವತೆಗಳಿಗೆ ಉತ್ಸವ, ಪರ್ವ, ನಡಾವಳಿಗಳನ್ನು ನಡೆಸಿಕೊಂಡು ಪರಂಪರಾನುಗತ ದಾನ - ಧರ್ಮಗಳನ್ನು ಮುಂದುವರೆಸಿಕೊಂಡು ಬಂದರು. ಈ ಕೆಲಸಗಳಿಗಾಗಿ ಬ್ರಾಹ್ಮಣರನ್ನು ಕರೆಸಿದರು. ಅವರು ದೈವಗಳನ್ನು ಆರಾಧಿಸುವ ಶ್ರೀ ಕ್ಷೇತ್ರದಲ್ಲಿ ದೇವರ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿ ಪೂಜಿಸಬೇಕೆಂದು ಹೆಗ್ಗಡೆಯವರಿಗೆ ಸಲಹೆಯಿತ್ತರು.

ಈ ಬಗ್ಗೆ ಹೆಗ್ಗಡೆಯವರು ಯೋಚಿಸುತ್ತಿರುವಾಗ ಧರ್ಮದೇವತೆಗಳು ತಮ್ಮ ದೂತನಾದ ಅಣ್ಣಪ್ಪನನ್ನು ಮಂಗಳೂರಿನ ಕದಿರೆಗೆ ಕಳುಹಿಸಿ ಅಲ್ಲಿ ಕಾಶಿಯಿಂದ ತಂದಿರಿಸಿದ್ದ ಶಿವಲಿಂಗವನ್ನು ಶ್ರೀ ಕ್ಷೇತ್ರಕ್ಕೆ ತರುವಂತೆ ಆದೇಶಿಸಿದರು. ಅಂತೆಯೇ ಅಣ್ಣಪ್ಪ ಸ್ವಾಮಿಯ ಶಿವಲಿಂಗವನ್ನು ಕದಿರೆಯಿಂದ ತಂದು ಈಗ ದೇವಾಲಯವಿರುವ ಸ್ಥಳದಲ್ಲಿರಿಸಿದರು. ಸುಂದರವಾದ ಈ ಶಿವಲಿಂಗವನ್ನು ಕಂಡು ಆನಂದಭರಿತರಾದ ಹೆಗ್ಗಡೆಯವರು ಅದಕ್ಕೆ ತಕ್ಕ ದೇವಾಲಯವನ್ನು ಕಟ್ಟಿಸಿದರು.

ಮುಂದೆ ಕ್ರಿ. ಶ. ೧೫೦೩ರಲ್ಲಿ ಶ್ರೀ ದೇವರಾಜ ಹೆಗ್ಗಡೆ ಎಂಬವರ ಕಾಲದಲ್ಲಿ ಉಡುಪಿಯ ಅಷ್ಟಮಠಗಳಲ್ಲೊಂದಾದ ಶ್ರೀ ಸೋದೆಮಠದ ಪೂಜ್ಯ ವಾದಿರಾಜ ಸ್ವಾಮಿಗಳು ಹೆಗ್ಗಡೆಯವರ ಆಹ್ವಾನದ ಮೇರೆಗೆ ಶ್ರೀ ಕ್ಷೇತ್ರಕ್ಕೆ ಆಗಮಿಸಿದರು. ವಿಭೂತಿ ಪುರುಷರಾದ ಸ್ವಾಮಿಗಳ ಬಗ್ಗೆ ತುಂಬಾ ಗೌರವವಿದ್ದ ಹೆಗ್ಗಡೆಯವರು ಅವರನ್ನು ಸೂಕ್ತವಾಗಿ ಸತ್ಕರಿಸಿ, ಆತಿಥ್ಯ ಸ್ವೀಕರಿಸುವಂತೆ ವಿನಂತಿಸಿದರು. ದೈವಗಳು ಇಲ್ಲಿನ ಶಿವಾಲಯಗಳನ್ನು ಸ್ಥಾಪಿಸಿದ್ದರಿಂದ, ಶಿವಲಿಂಗವನ್ನು ಆಗಮೋಕ್ತವಾಗಿ ಪ್ರತಿಷ್ಠಾಪಿಸಬೇಕೆಂದು ಅವರು ಸಲಹೆಯಿತ್ತರು. ಅಂತೆಯೇ ಹೆಗ್ಗಡೆಯವರು ಪೂಜ್ಯ ವಾದಿರಾಜ ಸ್ವಾಮಿಗಳನ್ನು ಈ ಕಾರ್ಯಕ್ರಮ ನೆರವೇರಿಸಿಕೊಡಲು ವಿನಂತಿಸಿದರು. ಹೆಗ್ಗಡೆಯವರ ಆತಿಥ್ಯ ತಮ್ಮ ಮೇಲಿನ ಗೌರವ, ವಿಶ್ವಾಸಗಳಿಂದ ಹರ್ಷಿತರಾದ ಸ್ವಾಮೀಜಿಯವರು ಮಂಜುನಾಥನ ಲಿಂಗವನ್ನು ವಿಧಿ ಪ್ರಕಾರ ಪ್ರತಿಷ್ಠಾಪಿಸಿ, ಶ್ರೀ ಕ್ಷೇತ್ರಕ್ಕೆ 'ಧರ್ಮಸ್ಥಳ' ಎಂಬ ನಾಮಾಂಕಿತವನ್ನಿತ್ತರು. ಈ ಕಾರಣಗಳಿಂದಾಗಿ ಶ್ರೀ ಕ್ಷೇತ್ರ ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಇಲ್ಲಿನ ಆರಾಧ್ಯದೈವ ಶ್ರೀ ಮಂಜುನಾಥ, ಶ್ರೀ ಚಂದ್ರನಾಥ, ಹಾಗೂ ಧರ್ಮದೇವತೆಗಳು. ಇಲ್ಲಿನ ಅರ್ಚಕರು ವೈಷ್ಣವ ಬ್ರಾಹ್ಮಣರು, ಹೆಗ್ಗಡೆಯವರು ಜೈನಮತಾವಲಂಬಿಗಳು. ಇಲ್ಲಿ ನಡೆಯುವ ದಾನ - ಧರ್ಮಗಳಿಗೆ ಜಾತಿ-ಮತ-ಪಂಥಗಳ ಭೇದವಿಲ್ಲದೆ ಸಮಾನಾವಕಾಶ. ಎಲ್ಲರಿಗೂ ಒಂದೇ ತೆರನಾದ ಆದರಾತಿಥ್ಯ. ಹಾಗಾಗಿಯೇ

ಇದು ಸರ್ವಧರ್ಮಗಳ ತವರಾಗಿ ಬೆಳೆದುಬಂದಿದೆ.

ಧರ್ಮಸ್ಥಳದ ಗೊಮ್ಮಟನ ಮೂರ್ತಿಯು ತೀರಾ ಇತ್ತೀಚಿನ ಮೂರ್ತಿಯಾಗಿದೆ. ಶ್ರೀ ಧರ್ಮಸ್ಥಳಕ್ಕೆ ಸುಮಾರು ೮೦೦ ವರ್ಷಗಳ ಭವ್ಯ ಇತಿಹಾಸವಿದೆ. ವಿವಿಧ ಧರ್ಮಗಳ ಜೊತೆಗೆ ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿಗಳ ನೆಲೆವೀಡು ನಮ್ಮ ಸಮೃದ್ಧ ಕನ್ನಡ ನಾಡು. ಈ ನಾಡಿನಲ್ಲಿ ಸರ್ವಧರ್ಮಗಳ ಸಾರವನ್ನೂ ಭಾರತೀಯ ಸಂಸ್ಕೃತಿಯ ಮೌಲ್ಯಾದರ್ಶನಗಳನ್ನೂ ತನ್ನದಾಗಿಸಿಕೊಂಡು ಸದ್ದುಗದ್ದಲವಿಲ್ಲದೆ ಧರ್ಮ ಸಮನ್ವಯತೆಯನ್ನು ಸಾರುವ ಧರ್ಮಸ್ಥಳ ಸಣ್ಣ ಊರಾದರೂ, ಚಾರಿತ್ರಿಕ ಹಿನ್ನಲೆಯುಳ್ಳ ಪವಿತ್ರ ಧಾರ್ಮಿಕ ಕೇಂದ್ರ. ನಾಡಿನ ಒಳಗೂ, ಹೊರಗೂ ಧರ್ಮಧ್ವಜವನ್ನು ಮುಗಿಲೆತ್ತರಕ್ಕೆ ಹಾರಿಸಿ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಂಡಿದೆ.

ಈ ಕ್ಷೇತ್ರವು ಧಾರ್ಮಿಕ, ಸಾಂಸ್ಕೃತಿಕ ಪರಂಪರೆಗಳ ಪ್ರತೀಕ ಕೂಡ. ಧರ್ಮ ತತ್ವಗಳ ಅನುಷ್ಠಾನ-ಆಚರಣೆಯೇ ಈ ಕ್ಷೇತ್ರದ ತಳಹದಿ. ಇಲ್ಲಿ ಮಾತಿಗೆ ಬೆಲೆ. ನುಡಿದಂತೆ ನಡೆಯಬೇಕು. ಸತ್ಯ ಧರ್ಮಗಳನ್ನು ಕಾಪಾಡಬೇಕು. ಮಾತಿನ ಕೃತಿ ರೂಪದ ಅನುಷ್ಠಾನಕ್ಕೆ ಇಲ್ಲಿ ಪ್ರಾಧಾನ್ಯತೆ. ಇಲ್ಲಿಗೆ ಬರುವ ಯಾತ್ರಿಕರು ಮಾತ್ರವಲ್ಲದೆ, ಬಾಹುಬಲಿಯ ತತ್ವಗಳಲ್ಲಿಯೂ ಅಹಿಂಸೆ, ಸತ್ಯ, ಶಾಂತಿ, ಧರ್ಮ ನೆಲೆಯಾಗಿದೆ. ಆದುದರಿಂದ ಹೆಗ್ಗಡೆ ಕುಟುಂಬದವರು ಬಾಹುಬಲಿಯ ಮೇಲಿನ ಗೌರವ, ಅಭಿಮಾನಗಳ ಪ್ರತಿಯಾಗಿ ತಮ್ಮ ಕ್ಷೇತ್ರದಲ್ಲಿ ಮೂರ್ತಿಯನ್ನು ಸ್ಥಾಪಿಸಿರುವುದನ್ನು ನಾವು ಗಮನಿಸಬಹುದು.[೨೫]

# ಅಧ್ಯಾಯ - ಮೂರು

# ಕರಾವಳಿ ಜಿಲ್ಲೆಗಳ ಜೈನ ಧರ್ಮ ಮತ್ತು ತತ್ವಗಳು

## ೧. ೧ - ಬಾಹುಬಲಿಯ ಆಚರಣೆಗಳು

ಜೈನ ಗೃಹಸ್ಥನ ಆರು ಅವಶ್ಯಕ ಕ್ರಿಯೆಗಳಲ್ಲಿ ಮೊದಲನೆಯದು ದೇವಪೂಜೆ. ಇದರಲ್ಲಿ ತೀರ್ಥಂಕರರ ಪ್ರತಿಮೆಗಳ ಪೂಜೆಗೆ ಪ್ರಾಧಾನ್ಯವಿದೆ. ತೀರ್ಥಂಕರರಲ್ಲದ ಎಂದರೆ ತೀರ್ಥಂಕರ ಕೇವಲಿಗಳಿಂದ ಅನ್ಯರಾದ ಕೇವಲಿಗಳ ಪ್ರತಿಮೆ ಪೂಜೆಯ ಬಗ್ಗೆ ವಿವಾದವಿದೆ. ಕೇವಲ ಜ್ಞಾನ ಸಂಪನ್ನರಾದವರನ್ನು ಎಂದರೆ ಕೇವಲಿಗಳನ್ನು ಮೂರು ಪ್ರಕಾರವಾಗಿ ಹೇಳಿದೆ. ೧. ತೀರ್ಥಂಕರ ಕೇವಲಿ ೨. ಗಣಧರ ಕೇವಲಿ ೩. ಸಾಮಾನ್ಯ ಕೇವಲಿ. ಬಾಹುಬಲಿ ಜಿನನು ಸಾಮಾನ್ಯ ಕೇವಲಿಗಳಲ್ಲಿ ಒಬ್ಬನು. ಬಹುಸಂಖ್ಯಾತರಾದ ಈ ಸಾಮಾನ್ಯ ಕೇವಲಿಗಳಲ್ಲಿ ಬಾಹುಬಲಿ ಜಿನನೊಬ್ಬನ ಪ್ರತಿಮೆಗಳು ಪೂಜೆಗೊಂಡಿವೆ.[೬]

ಇವುಗಳಲ್ಲಿ ಪ್ರಾಚೀನ ರೀತಿಯ ಪ್ರತಿಮೆಗಳು ದಕ್ಷಿಣ ಭಾರತದಲ್ಲಿ ಇವೆ. ಅದರಲ್ಲೂ ವಿಶೇಷವಾಗಿ ಕರ್ನಾಟಕದಲ್ಲಿವೆ. ಬಹುಸಂಖ್ಯಾತ ಸಾಮಾನ್ಯ ಕೇವಲಿಗಳಲ್ಲೊಬ್ಬನೆನಿಸಿ, ಪರಿಗಣನೆ ಹೊಂದಿರುವ ಬಾಹುಬಲಿ ಜಿನನ ಪ್ರತಿಮೆ, ಪ್ರತಿಷ್ಠಾಪನೆಗೆ - ಪೂಜೆಗೆ ವಿಶೇಷವಾದ ಕಾರಣವಾದರೂ ಏನು? ಎಂಬ ಪ್ರಶ್ನೆ ಇದೆ. ಪ್ರಾಯಶಃ ಬಾಹುಬಲಿ ಸ್ವಾಮಿಯ ಜೀವನದ ಕೆಲವೊಂದು ವಿಶಿಷ್ಟ ಸಂಗತಿಗಳು ಅವನ ಈ ಪೂಜಾ ವಿಶೇಷಕ್ಕೆ ಕಾರಣವಾಗಿರಬಹುದು. ಪ್ರಥಮ ತೀರ್ಥಂಕರನಾದ ವೃಷಭದೇವನ ಮಗನಾದ ಬಾಹುಬಲಿಯು ತಂದೆಗಿಂತಲೂ ಮೊದಲು ಸಿದ್ಧ ಪದವಿ ಪಡೆದದ್ದು; ಅಲ್ಲದೆ ಪ್ರಥಮ ಚಕ್ರೇಶ್ವರನಾದ ತನ್ನ ಅಣ್ಣ ಭರತ ಚಕ್ರವರ್ತಿಯನ್ನು ದೃಷ್ಟಿ -ಜಲ-ಮಲ್ಲ ಯುದ್ಧಗಳಲ್ಲಿ ಸೋಲಿಸಿ ತನ್ನ ವಶಕ್ಕೆ ಸಂದ ಸಾಮ್ರಾಜ್ಯವನ್ನು ಕಡೆಗಣಿಸಿ 'ತೃಣಮಿವ ವಿಗಣಯ್ಯ ಪ್ರಾಜ್ಯ ಸಾಮ್ರಾಜ್ಯ ಭಾರಂ' (ಮ. ಪುರಾಣ ೩೬/೨೦೪) ಮುನಿದೀಕ್ಷೆ ಪಡೆದುದು, ಹಲವು ವರ್ಷಕಾಲ ನಿಂತು ತಪಸ್ಸು ಮಾಡಿದುದು, ಈ ತಪಸ್ಸಿನ ಕಾಲದಲ್ಲಿ ಪಾದಗಳ ಬಳಿ ಹುತ್ತಗಳು ಬೆಳೆದು ಮೈಮೇಲೆ ಸರ್ಪಗಳು ಸಂಚರಿಸಿದರೂ ಹಾಗೂ ಮಾಧವೀ ಲತೆ ಬೆಳೆದು ಮೈಗೆ ಬಾಹುಗಳಿಗೆ ಸುತ್ತಿಕೊಂಡರೂ ವಿಚಲಿತನಾಗದೆ ತಪಸ್ಸನ್ನು ಮಾಡಿದುದು, ತನ್ನ ಅಣ್ಣ ಭರತ ಚಕ್ರೇಶನಿಂದ ಪೂಜಿತನಾಗಿ ಕೇವಲ ಜ್ಞಾನ ಸಂಪನ್ನನಾದುದು, ಈ ಎಲ್ಲಾ ಪ್ರಸಂಗಗಳು ಬಾಹುಬಲಿ ಜಿನನ ಪ್ರತಿಮೆಗಳ ಸ್ಥಾಪನೆ ಮತ್ತು ಪೂಜೆಗೆ ಕಾರಣವಾಗಿರಬಹುದೆಂದು ತಿಳಿಯಬಹುದಾಗಿದೆ.

ಬಾಹುಬಲಿಯನ್ನೇ ಗೊಮ್ಮಟೇಶ್ವರ ಎಂಬ ಹೆಸರಿನಿಂದ ಕರೆಯುವ ಪದ್ಧತಿ ಕುತೂಹಲಕಾರಿಯಾದುದು. ಶ್ರವಣಬೆಳಗೊಳದ ಶಾಸನಗಳಲ್ಲಿ ಚಾಮುಂಡರಾಯನನ್ನು ಗೊಮ್ಮಟ ಎಂದೂ ಅವನು ಮಾಡಿಸಿದ ಬಾಹುಬಲಿ ವಿಗ್ರಹವನ್ನು ಗೊಮ್ಮಟೇಶ್ವರ ಎಂದೂ ಕರೆಯಲಾಗುತ್ತದೆ. ಗೊಮ್ಮಟ ಎಂದರೆ ಚೆಲುವ, ಸುಂದರ, ಮನ್ಮಥ ಎಂಬ ಅರ್ಥಗಳಿವೆ. ಚಾಮುಂಡರಾಯನನ್ನು ಅವನ ಆಪ್ತರು, ಹಿರಿಯರು ಕರೆಯುತ್ತಿದ್ದುದು ಗೊಮ್ಮಟ ಎಂಬ ಹೆಸರಿನಿಂದ. ಆದ್ದರಿಂದ ಚಾಮುಂಡರಾಯ ಮಾಡಿಸಿದ ಅವನ ಆರಾಧ್ಯದೈವವಾದ ಬಾಹುಬಲಿ ಮೂರ್ತಿಗೆ

ಗೊಮ್ಮಟೇಶ್ವರ ಎಂಬ ಹೆಸರು ಬಂದಿದೆ. ಅಲ್ಲಿಂದ ಮುಂದೆ ಬಾಹುಬಲಿಯ ವಿಗ್ರಹಗಳಿಗೆಲ್ಲ ಗೊಮ್ಮಟೇಶ್ವರ ಎಂಬ ಹೆಸರು ಸಾಮಾನ್ಯವಾಯಿತು, ಸ್ಥಿರವಾಯಿತು; ಅದೇ ಪ್ರಸಿದ್ಧವೂ ಆಯಿತು ಎಂದು ಹೇಳಬಹುದು.

ಮೊತ್ತ ಮೊದಲ ಬಾಹುಬಲಿ ವಿಗ್ರಹ ನಿರ್ಮಾಣ ಎಲ್ಲಿ ಆಯಿತು? ಇದಕ್ಕೆ ಬೊಪ್ಪಣ ಕವಿಯ ಒಂದು ಉಲ್ಲೇಖವಿದೆ. ಭರತ ಚಕ್ರವರ್ತಿ ೫೨೫ ಬಿಲ್ಲೆತ್ತರದ ಬಾಹುಬಲಿ ಪ್ರತಿಮೆಯನ್ನು ಪೌದನಪುರದ ಸಮೀಪದಲ್ಲಿ ಮಾಡಿಸಿದನು. ಇದಾದ ದೀರ್ಘಕಾಲದ ಬಳಿಕ ಆ ಜಿನ ಪ್ರತಿಮೆ ಸ್ಥಳವು ಭೀಕರವಾದ ಅಸಂಖ್ಯ ಕುಕ್ಕುಟ ಸರ್ಪಗಳಿಂದ ಆವರಿಸಿಕೊಂಡಿರುವುದರಿಂದ (ಕುಕ್ಕುಟಸರ್ಪವೆಂದರೆ, ಅತ್ಯಂತ ಹೆಚ್ಚು ವಿಷಪೂರಿತವಾದ ಹಾವು, ಎಂದು ಕೆಲವರ ಅಭಿಪ್ರಾಯ ಒಟ್ಟಿನಲ್ಲಿ ಇದು ಒಂದು ಜಾತಿಯ ಹಾವುಗಳೆಂದು ಕಲ್ಪಿಸಲಾಗುತ್ತದೆ.) ಸಾಮಾನ್ಯ ಜನರಿಗೆ ಅದರ ದರ್ಶನ ಅಲಭ್ಯವಾಯಿತು. ಆದುದರಿಂದ ಈ ಪ್ರತಿಮೆಗೆ ಕುಕ್ಕುಟೇಶ್ವರ ಎಂಬ ಹೆಸರು ಬಂದಿತು. ಆ ಜಿನ ಪ್ರತಿಮೆಯ ಕಲ್ಪನೆಯಿಂದ ಚಾವುಂಡರಾಯನು ಶ್ರವಣಬೆಳಗೊಳದ ದೊಡ್ಡ ಬೆಟ್ಟದ ಮೇಲೆ ಅನುಪಮ ಸೌಂದರ್ಯದ ಬಾಹುಬಲಿ-ಜಿನಮೂರ್ತಿಯನ್ನು ಮಾಡಿಸಿದನು. ಈ ಮೂರ್ತಿಗೆ ದಕ್ಷಿಣ ಕುಕ್ಕುಟೇಶ ಎಂಬ ಹೆಸರಾಯಿತು. ಕ್ರಿ. ಶ. ಹತ್ತನೇ ಶತಮಾನದಲ್ಲಿ (ಕ್ರಿ.ಶ. ೯೮೧)ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳಿಂದ ರಚಿತವಾಗಿ ಗೊಮ್ಮಟಸಾರ (ಕರ್ಮಕಾಂಡ) ದಲ್ಲಿ 'ದಕ್ಷಿಣ ಕುಕ್ಕುಡ ಜಿಣೋಜಯಉ'. ದಕ್ಷಿಣ ಕುಕ್ಕುಟಜಿನನು ಜಯ ಸಂಪನ್ನನಾಗಲಿ (ಗಾಹೆ ೯೬೮) ಎಂದು ಹೇಳಿದೆ. ಇದರಿಂದ ಭರತ ಚಕ್ರೇಶ್ವರನು ಪೌದನಪುರನ ಪುರದ ಬಳಿ ೫೨೫ ಬಿಲ್ಲುತ್ಸೇಧದ ಬಾಹುಬಲಿ ಜಿನನ ಪ್ರತಿಮೆಯನ್ನು ಸ್ಥಾಪಿಸಿ ಪೂಜಿಸಿದನೆಂಬ ಕಥೆ ಕ್ರಿ.ಶ. ಹತ್ತನೇ ಶತಮಾನ ಕಾಲಕ್ಕಿಂತಲೂ ಬಹು ಹಿಂದಿನ ಕಾಲದಲ್ಲಿಯೇ ಪ್ರಚಲಿತವಿದ್ದು, ಇದು ಕರ್ನಾಟಕದಲ್ಲಿ ಬಾಹುಬಲಿ ಜಿನ ಮೂರ್ತಿಗಳು ಪ್ರತಿಷ್ಠಾಪನೆ ಮತ್ತು ಪೂಜೆಗೆ ಮೂಲ ಕಾರಣವಾಗಿರಬೇಕೆಂದು ಸಂಭವನೀಯವಾಗಿ ತಿಳಿಯಬಹುದಾಗಿದೆ.

## ೩. ೧ - ಜೈನ ಧರ್ಮ ಮತ್ತು ತತ್ವಗಳು

"ಸಮ್ಯಗ್ದರ್ಶನ ಜ್ಞಾನ ಚಾರಿತ್ರಾಣಿ ಮೋಕ್ಷ ಮಾರ್ಗ" ಎನ್ನುವುದು ಜೈನಧರ್ಮದ ಮುಖ್ಯ ತತ್ವಗಳಾಗಿವೆ. ಜೈನತತ್ವದಲ್ಲಿ ನಂಬಿಕೆಯೇ ಸಮ್ಯಗ್ದರ್ಶನ. ಈ ತತ್ವಾರ್ಥಗಳನ್ನು ಪ್ರೀತಿಸಿ ಬೇರೆ ಬೇರೆಯಾಗಿ ತಿಳಿಯುವುದು ಸಮ್ಯಗ್ ಜ್ಞಾನ. ಈ ಜ್ಞಾನದಿಂದ ಜೀವಿಗಳು ನಾಶವಾಗದಂತೆ ನಡೆದುಕೊಳ್ಳುವುದು ಸಮ್ಯಗ್‌ಚಾರಿತ್ರ್ಯ. ಈ ಮೂರನ್ನು ತ್ರಿರತ್ನಗಳೆಂದು ಕರೆಯುತ್ತಾರೆ. ಬರಿ ಕರ್ಮದ ಸ್ವರೂಪ ತಿಳಿದರೆ ಮೋಕ್ಷ ಲಭಿಸದು. ಕರ್ಮ ಬಂಧನದಿಂದ ಬಿಡುಗಡೆ ಹೊಂದುವುದೇ ಮೋಕ್ಷ.[೧೭]

ಜೈನಾಚಾರ್ಯರು ಉಪದೇಶಿಸಿದ ತತ್ವಗಳನ್ನೇ ಜೈನರು ತಮ್ಮ ಸಿದ್ಧಾಂತಗಳೆಂದು ಪಾಲಿಸಿಕೊಂಡು ಬರುತ್ತಿದ್ದಾರೆ. ಜೈನಸಿದ್ಧಾಂತದ ಪ್ರಕಾರ ಲೋಕ ಅನಾದಿ, ಕರ್ಮವೂ ಅನಾದಿ. ಅನಾದಿಕಾಲದಿಂದಲೂ ಸ್ವಭಾವತಃ ಶುದ್ಧವಾದ ಜೀವವು ಕರ್ಮದೊಡನೆ ಸೇರಿ ದುಃಖಪಡುತ್ತಾ ಇದೆ.

ಈ ಜಗತ್ತು ಅಕರ್ತೃಕ. ಅಂದರೆ, ಅದನ್ನು ಹುಟ್ಟಿಸುವ, ರಕ್ಷಿಸುವ, ನಾಶಪಡಿಸುವ ಶಕ್ತಿ ಯಾವುದೂ ಇಲ್ಲ. ಅದು ಚಿರಂತನ. ಜಗದ ಮೇಲ್ಮೈಯಲ್ಲಿ ಸೃಷ್ಟಿ-ಸ್ಥಿತಿ-ಲಯ ಸ್ವರೂಪವನ್ನು ಕಾಣಬಹುದಾದರೂ, ಸದಾ ಪರಿವರ್ತನಶೀಲವಾದ ಜಗತ್ತು ನಿತ್ಯ ಚಿರಂತನವಾದುದು.[೧೭]

ಜೀವ ಮತ್ತು ಆತ್ಮ ಒಂದೇ ವಸ್ತು. ಜೀವಾತ್ಮನೆಂದು ಅದನ್ನು ಕರೆಯಬಹುದು. ಸರ್ವಕರ್ಮಗಳನ್ನು ಕಳೆದ ಪರಿಶುದ್ಧ ಜೀವಾತ್ಮನೇ ಪರಮಾತ್ಮನು. ತೀರ್ಥಂಕರರು ಅಂಥ ಪರಮಾತ್ಮ ಸ್ವರೂಪ ಪಡೆದವರು.[೧೭]

ತಾನು ಮಾಡಿದ ಕರ್ಮ ಅದು ಸತ್ಕರ್ಮವೇ ಇರಲಿ, ದುಷ್ಕರ್ಮವೇ ಇರಲಿ, ತಾನು ಉಂಡು ತೀರಿಸಲೇಬೇಕು. ಕರ್ಮಗಳಿಂದ ಬಿಡುಗಡೆ ಹೊಂದಿದಾಗಲೇ ಸ್ವರ್ಗ - ನರಕಗಳ ಬಾಧೆ ತಪ್ಪಿಸಿ ಮೋಕ್ಷವನ್ನು ಸಾಧಿಸಬಹುದು. "ಅಹಿಂಸೆಯೇ ಪರಮಧರ್ಮ". ಅಹಿಂಸೆಯೇ ಧರ್ಮದ ಜೀವಾಳ. ಅಹಿಂಸೆಯಿಲ್ಲದಿದ್ದರೆ, ಧರ್ಮವೇ ಇಲ್ಲ. ಆದರೆ ಜೈನ ಧರ್ಮದ ಅಹಿಂಸೆ ಬಹಳ ಆಳವಾದುದು; ವ್ಯಾಪಕವಾದುದು; ಕ್ರಮದಿಂದ ಸಾಧಿಸಲು ಸಾಧ್ಯವಾಗುವಂತಹುದು. ಇದು ವಿಶ್ವದ ಸಕಲ ಜೀವಿಗಳನ್ನು ಬದುಕು, ಬದುಕಿಸು ಎಂಬ ಸಂಜೀವಿನಿಯಿಂದ ಸಂರಕ್ಷಿಸುತ್ತದೆ. ಜಗತ್ತಿನ ಸಕಲ ಪ್ರಾಣಿಗಳಿಗೆ ಬದುಕಲು ಅವಕಾಶ ಕೊಡುತ್ತದೆ. ಬರೀ ಮಾನವ ಧರ್ಮವೇ ಶ್ರೇಷ್ಠವೆಂದೇನಲ್ಲ. ಸಕಲ ಜೀವರಾಶಿಗಳು ಸಹ ಸಮಾನ ಗೌರವ ಪಡೆಯುವ ಧರ್ಮಶ್ರೇಷ್ಠವಾದುದು. ಜೈನಧರ್ಮದ ಅಹಿಂಸೆ ಅದಕ್ಕೆ ಅವಕಾಶವನ್ನು ಕೊಡುತ್ತದೆ. ವಿಶ್ವಶಾಂತಿಯ ಮಹಾ ಆದರ್ಶ ಅದರಲ್ಲಿ ಅಡಗಿದೆ. ಸಕಲ ಮತತತ್ವಗಳಿಗೆಲ್ಲ ಅವಕಾಶಕೊಡುವುದುಂಟು.[೧೭]

## ೩. ೨ - ಜಿನ ಚೈತ್ಯಾಲಯಗಳು

ಜೈನ ಧರ್ಮದಲ್ಲಿ ದೇವಾಲಯವನ್ನು ಬಸದಿ, ಬಸ್ತಿ, ಜಿನಾಲಯ, ಹಾಗೂ ಜಿನ ಚೈತಾಲಯಗಳೆಂದು ಕರೆಯುತ್ತಾರೆ. ಬಸದಿಗಳಲ್ಲಿ ಅನೇಕ ಪ್ರತಿಮೆಗಳಿರುತ್ತದೆ. ಎತ್ತರದಲ್ಲಿ ಮೂಲಸ್ವಾಮಿಯ (ಮೂಲತೀರ್ಥಂಕರ) ದೊಡ್ಡದಾದ ಮೂರ್ತಿ ಇರುತ್ತದೆ. ಮೂಲ ತೀರ್ಥಂಕರನ ವಿಗ್ರಹವು ವೃಷಭನಾಥನಿಂದ - ವರ್ಧಮಾನ ತೀರ್ಥಂಕರರವರೆಗಿನ ೨೪ ಜನ ತೀರ್ಥಂಕರರಲ್ಲಿ ಯಾವುದಾದರೂ ಒಬ್ಬರ ಹೆಸರಿನಿಂದ ಇರುತ್ತದೆ. ಅದು ಅಲ್ಲದೆ ಉಳಿದ ೨೩ ತೀರ್ಥಂಕರರ ಪ್ರತ್ಯೇಕ ಬಿಂಬಗಳು ಇರುತ್ತವೆ. ಜೊತೆಗೆ ಶೃತ, ಗಣಧರರ ಪಾದುಕೆ, ಸರ್ವಾಹ್ಣಯಕ್ಷ, ಅಷ್ಟಮ ನಂದೀಶ್ವರ ಪ್ರತಿಮೆ, ಇತರ ಯಕ್ಷ - ಯಕ್ಷಿಯರು, ಸರಸ್ವತೀ - ಹೀಗೆ ಅನೇಕ ಬಿಂಬಗಳಿರುತ್ತವೆ. ಕೆಲವು ಬಸದಿಗಳಲ್ಲಿ ಗೊಮ್ಮಟನ ಚಿಕ್ಕ ಮೂರ್ತಿಗಳೂ ಇರುತ್ತವೆ. ಅಷ್ಟೇ ಅಲ್ಲದೆ, ತಾಮ್ರದ ತಗಡಿನ ಮೇಲೆ ಬರೆದಿರುವ ಅನೇಕ ಯಂತ್ರಗಳೂ ಇರುತ್ತವೆ. ವ್ಯಕ್ತಿಯೊಬ್ಬ ತನಗೆ ಎದುರಾದ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಇಂಥ ಆರಾಧನಾ ಯಂತ್ರವನ್ನು ಮಾಡಿಸುತ್ತಾನೆ. ಅವುಗಳಲ್ಲಿ ಕಲಿಕುಂಡ ಯಂತ್ರ, ಭಕ್ತಾಮರಯಂತ್ರ, ಷೋಡಶಭಾವನಾಯಂತ್ರ, ಮೃತ್ಯುಂಜಯಯಂತ್ರ, ಸಿದ್ಧ ಚಕ್ರಯಂತ್ರ, ಶಾಂತಿ ಚಕ್ರಯಂತ್ರ ಹೀಗೆ ಅನೇಕ ಯಂತ್ರಗಳು ಇರುತ್ತವೆ. ಬಸದಿಗಳಲ್ಲಿ ಪೂಜೆಯನ್ನು ಪುರೋಹಿತರು (ಇಂದ್ರರು) ಮಾಡುತ್ತಾರೆ. ಆದರೆ ಮನೆಯಲ್ಲಿ ಜಿನಬಿಂಬವನ್ನು ಸ್ವತಃ ಗಂಡಸರೂ, ಹೆಂಗಸರೂ ಪೂಜಿಸಬಹುದು. ಬಸದಿಯು ಸಾಮಾನ್ಯವಾಗಿ ಆಯಾಯ ಊರಿನ ಪರಂಪರೆಯಂತೆ ನಿರ್ಧಿಷ್ಟವಾದ ಸಾಂಪ್ರದಾಯಿಕ ರೀತಿಯಲ್ಲಿಯೇ ನಿರ್ಮಿತವಾದ ಕಟ್ಟಡವಾಗಿರುತ್ತದೆ. ಗೋಪುರ, ಮಾನಸ್ತಂಭ, ಗಂಟೆ ಮಂಟಪ, ನಂತರ ಎತ್ತರದಲ್ಲಿ ದೇವರ ಬಿಂಬಗಳ ಮಂಟಪ, ಮೂಲ ತೀರ್ಥಂಕರನ ಗರ್ಭಗುಡಿ ಇರುತ್ತದೆ. ಸುತ್ತಲೂ ಜಗಲಿ ಇದ್ದು ದೇವರ ಪ್ರದಕ್ಷಿಣೆಗೆ ಅನುಕೂಲವಾಗಿರುತ್ತದೆ. ಸುತ್ತಲೂ ವಿಶಾಲವಾದ ಅಂಗಳವಿರುತ್ತದೆ. ಅಂಗಳದ ಒಂದು ಮೂಲೆಯಲ್ಲಿ ನಾಗದೇವರ ಪ್ರತಿಮೆಗಳು, ಕ್ಷೇತ್ರಪಾಲ ಯಕ್ಷ ಮುಂತಾದ ದೇವರ ಮೂರ್ತಿಗಳು ಇರುತ್ತವೆ. ದೇವರ ಪೂಜೆಯ

ಸಮಯದಲ್ಲಿ ಡೋಳುಗಂಟೆಯನ್ನು ಬಾರಿಸಲಾಗುತ್ತದೆ. ಪ್ರತಿದಿನ ಜಿನಪ್ರತಿಮೆಗೆ ಜಲ, ಕ್ಷೀರ, ಪಂಚಾಮೃತಗಳಿಂದ ಅಭಿಷೇಕ ಮಾಡಲಾಗುತ್ತದೆ. ಮಂತ್ರ ಪೂರ್ವಕವಾಗಿ ಆರತಿ ಬೆಳಗಿ ಮಾಡುವ ಪೂಜೆಗೆ ನಿತ್ಯ ಪೂಜೆಯೆಂದು ಹೆಸರು.

## ಅಭಿಷೇಕದ ವಿಧಾನಗಳು

ಜಿನನಿಗೆ ಅಥವಾ ತೀರ್ಥಂಕರನಿಗೆ ಮಾಡುವ ಅಭಿಷೇಕದಲ್ಲಿ ನಾಲ್ಕು ಪ್ರಕಾರಗಳಿವೆ.

೧. ಜಲಾಭಿಷೇಕ
೨. ಕ್ಷೀರಾಭಿಷೇಕ
೩. ಪಂಚಾಮೃತಾಭಿಷೇಕ
೪. ಮಹಾಭಿಷೇಕ

**ಜಲಾಭಿಷೇಕ :** ಶುದ್ಧವಾದ ಸೋಸಿದ ನೀರಿನಿಂದ ಜಿನನ ಬಿಂಬಕ್ಕೆ ಅಭಿಷೇಕ ಮಾಡುವುದಕ್ಕೆ ಜಲಾಭಿಷೇಕವೆಂದು ಹೆಸರು.

**ಕ್ಷೀರಾಭಿಷೇಕ :** ಶುದ್ಧವಾದ ಹಸುವಿನ ಹಾಲಿಗೆ ಸುಗಂಧದ್ರವ್ಯಗಳನ್ನು ಸೇರಿಸಿ ಅಭಿಷೇಕ ಮಾಡುವುದಕ್ಕೆ ಕ್ಷೀರಾಭಿಷೇಕವೆನ್ನುತ್ತಾರೆ.

**ಪಂಚಾಮೃತಾಭಿಷೇಕ :** ಪಂಚ ವಿಧದ ದ್ರವ್ಯಗಳಿಂದ ಅಂದರೆ, ೫ ವಿಧವಾದ ಅಭಿಷೇಕ ದ್ರವ್ಯಗಳಿಂದ, ಹಾಲು, ಎಳೆನೀರು, ಕಬ್ಬಿನರಸ, ಮೊಸರು, ತುಪ್ಪ ಇವುಗಳಿಂದ ಅಭಿಷೇಕ ಮಾಡಿದರೆ, ಅದಕ್ಕೆ ಪಂಚಾಮೃತ ಅಭಿಷೇಕವೆಂದು ಹೆಸರು.

**ಮಹಾಭಿಷೇಕ :** ಪರಿಶುದ್ಧವಾದ ವಿವಿಧ ದ್ರವ್ಯಗಳಿಂದ ಕಲಶ ಸ್ಥಾಪನೆ ಮಾಡಿ, ಅವುಗಳಿಂದ ಅಭಿಷೇಕ ಮಾಡಿದರೆ ಅದನ್ನು ಮಹಾಭಿಷೇಕವೆಂದು ಕರೆಯುತ್ತಾರೆ. ಈ ಅಭಿಷೇಕದಲ್ಲಿ ಜಲ, ಎಳನೀರು, ಕಬ್ಬಿನ ಹಾಲು, ಕ್ಷೀರ, ಅರಶಿನ, ಶ್ರೀಗಂಧ, ಚಂದನ, ಅಷ್ಟಗಂಧ, ಕಲ್ಕಚೂರ್ಣ, ಪುಷ್ಪ ಮುಂತಾದ ವಸ್ತುಗಳನ್ನು ಉಪಯೋಗಿಸುತ್ತಾರೆ. ಈ ಅಭಿಷೇಕದಲ್ಲಿ ೧೦೮ ಕಲಶಗಳಿಂದ ೧೦೦೮ ಕಲಶಗಳವರೆಗೆ ಸ್ಥಾಪನೆ ಮಾಡಲಾಗುತ್ತದೆ.

## ೩. ೩ - ಬಾಹುಬಲಿಯ ನಾಮಗಳು

ಗೊಮ್ಮಟ, ಗೋಮಟೇಶ್ವರ, ಗೊಮ್ಮಟೇಶ್ವರ, ಕುಕ್ಕುಟೇಶ್ವರ, ದಕ್ಷಿಣ ಕಕ್ಕುಟೇಶ್ವರ ಎಂಬ ಇತ್ಯಾದಿ ಹೆಸರುಗಳಿವೆ. ಜೊತೆಗೆ ಭುಜಬಲಿ, ದೋರ್ಬಲಿ ಎಂಬ ಅಡ್ಡ ಹೆಸರುಗಳೂ ಇವೆ. ತಂದೆ ತಾಯಿಯರು ನಾಮಕರಣ ಮಾಡಿ ಇಟ್ಟ ಹೆಸರು ಬಾಹುಬಲಿ, ಭುಜಬಲಿ ಮತ್ತು ದೋರ್ಬಲಿ ಎಂಬುದು ಸಮನಾರ್ಥಕ ಪರ್ಯಾಯ

ಶಬ್ದಗಳು. ಈ ಹೆಸರುಗಳು ಈತನ ತೋಳಿನ ಬಲವನ್ನು ಒತ್ತಿ ಹೇಳುತ್ತದೆ. ಅಣ್ಣ ಭರತ ಚಕ್ರವರ್ತಿಯನ್ನು ಅನಾಮತ್ತಾಗಿ ಮೇಲೆತ್ತಿ ಹಿಡಿದು ನೆಲಕ್ಕೆ ಅಪ್ಪಳಿಸದೆ ಕೆಳಕ್ಕೆ ಇಳಿಸಿದ ಶಕ್ತಿಶಾಲಿ ಮಹಾಶೂರನಾಗಿರುವುದರ ಜತೆಗೆ ಮಹಾಸ್ವಾಭಿಮಾನಿ.

## ೩. ೪ - ಬ್ರಹ್ಮ ಸ್ತಂಭ



ಬ್ರಹ್ಮನ ವಿಗ್ರಹವು ಗೋಮಟೇಶ್ವರನ ವಿಗ್ರಹದ ಎದುರುಗಡೆಯಿರುವ ಬ್ರಹ್ಮಸ್ತಂಭದ ಮೇಲೆ ಇರುತ್ತದೆ. ತುಳುನಾಡಿನಲ್ಲಿ ಬ್ರಹ್ಮನ ಶಿಲ್ಪವು ೩ ಅಥವಾ ೪ ರೀತಿಯಲ್ಲಿ ಕಂಡುಬರುತ್ತದೆ. ಜೈನ ಸಂಪ್ರದಾಯದಲ್ಲಿ ಹತ್ತನೆಯ ತೀರ್ಥಂಕರನಾದ ಶೀತಲನಾಥನ ಯಕ್ಷನ ಹೆಸರು ಬ್ರಹ್ಮ ಅಥವಾ ಬ್ರಹ್ಮದೇವ. ವೈದಿಕ ಕಲ್ಪನೆಯಲ್ಲಿ ಬೆಳೆದು ಬಂದಿರುವ ಚತುರ್ಮುಖ ಬ್ರಹ್ಮನ ಸ್ವರೂಪದಲ್ಲಿ ಈ ಬ್ರಹ್ಮ ಯಕ್ಷ ಗೋಚರಿಸುತ್ತಾನೆ. ೧೦ನೇ ತೀರ್ಥಂಕರನಾದ ಶೀತಲನಾಥನ ಬಿಂಬದ ಪ್ರಭಾವಳಿಯ ಬಲಭಾಗದಲ್ಲಿ ಈತನ ಬಿಂಬವನ್ನು ನೋಡಬಹುದು.

ಇನ್ನೊಂದು ರೀತಿಯ ಬ್ರಹ್ಮನ ವಿಗ್ರಹವು ಗೊಮ್ಮಟೇಶ್ವರ. ವಿಗ್ರಹದ ಎದುರುಗಡೆಯಿರುವ ಬ್ರಹ್ಮಸ್ತಂಭದ ಮೇಲೆ ಇರುತ್ತದೆ. ಇಂಥ ಮೂರು ಬ್ರಹ್ಮನ ವಿಗ್ರಹಗಳು ಕಾರ್ಕಳ, ವೇಣೂರು, ಧರ್ಮಸ್ಥಳಗಳಲ್ಲಿರುವ ಬ್ರಹ್ಮಸ್ತಂಭಗಳ ಮೇಲಿವೆ. ಸುಖಾಸೀನ ಭಂಗಿಯಲ್ಲಿ ಕುಳಿತಿರುವ ಈ ವಿಗ್ರಹಗಳು ದ್ವಿಬಾಹುವಾಗಿದ್ದು, ಒಂದು ಕೈಯಲ್ಲಿ ವಜ್ರಾಯುಧವನ್ನೂ ಇನ್ನೊಂದು ಕೈಯಲ್ಲಿ ಬಹುಬೀಜ ಫಲವನ್ನೂ ಹಿಡಿದಿವೆ. ತಲೆಯ ಮೇಲೆ ಕಿರೀಟ, ಹಿಂಭಾಗದಲ್ಲಿ ಶಿರಶ್ಚಕ್ರ, ಕಿವಿಯಲ್ಲಿ ಮಕರ ಕುಂಡಲ, ಕೈಕಡಗ, ಭುಜಕಟ್ಟು, ಮಣಿಸರ ಮುಂತಾದವುಗಳಿಂದ ಅಲಂಕೃತವಾಗಿರುವ ಈ ಬ್ರಹ್ಮದೇವನು ಇಲ್ಲಿ ಕ್ಷೇತ್ರ ರಕ್ಷಕನಾಗಿದ್ದಾನೆ. ಇನ್ನೊಂದು ರೀತಿಯ ಬ್ರಹ್ಮನನ್ನು ಗೆಜ್ಜೆಬ್ರಹ್ಮ, ಬೆಟ್ಟದ ಬ್ರಹ್ಮ, ಗುಂಡದ ಬ್ರಹ್ಮ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಶಿಲ್ಪವು ತುಳುನಾಡಿನ ಎಲ್ಲಾ ಕಡೆಗಳಲ್ಲಿ ಹೆಚ್ಚಿನ ಸಂಖ್ಯೆಗಳಲ್ಲಿ ಕಂಡುಬರುತ್ತದೆ. ಶಿಲ್ಪದ ಕೆತ್ತನೆಯಲ್ಲಿ ಈ ಬ್ರಹ್ಮನು ಕುದುರೆಯ ಮೇಲೆ ಕುಳಿತಿದ್ದು, ಕುದುರೆಯು ಕೆನೆಯುವ ಭಂಗಿಯಲ್ಲಿರುತ್ತದೆ. ಕುದುರೆಯ ಕಾಲಿನ ಕೆಳಗೆ ಹುಲಿಯ ಚಿತ್ರವನ್ನು ಬಿಡಿಸುತ್ತಾರೆ. ರಾಜಯೋಧನಂತೆ ಕಂಡುಬರುವ ಈ ಬ್ರಹ್ಮನು ಒಂದು ಕೈಯಲ್ಲಿ ಖಡ್ಗವನ್ನೂ ಮತ್ತೊಂದು ಕೈಯಲ್ಲಿ ಬಹುಬೀಜ ಫಲವನ್ನೂ ಹಿಡಿದಿರುತ್ತಾನೆ. ತಲೆಯ ಮೇಲೆ ಕಿರೀಟವಿದ್ದು, ಕೆಲವು ಶಿಲ್ಪಗಳಲ್ಲಿ ಮುಕ್ಕೊಡೆಯೂ ಇರುತ್ತದೆ. ಕ್ರಿ.ಶ. ೧೧-೧೨ನೇ ಶತಮಾನಕ್ಕೆ ಸೇರಿದ ಇಂಥ ಬ್ರಹ್ಮನ ವಿಗ್ರಹಗಳು ಮೂಡಬಿದಿರೆಯ ಗುರುಬಸ್ತಿ, ಶೆಟ್ಟರ ಬಸ್ತಿಗಳಲ್ಲೂ ಕಂಡುಬರುತ್ತದೆ. ಬಂಗವಾಡಿಯ ಶಾಂತಿನಾಥನ ಬಸದಿಯಲ್ಲಿ ಕ್ರಿ.ಶ. ೧೪-೧೫ನೇ ಶತಮಾನಕ್ಕೆ

ಸೇರಿದ ಸುಂದರವಾದ ಬ್ರಹ್ಮನ ವಿಗ್ರಹಗಳಿವೆ. ಕಾರ್ಕಳದ ಹಿರಿಯಂಗಡಿಯಲ್ಲಿ ಇರುವ ಬಸದಿಯಲ್ಲಿಯೂ ಬ್ರಹ್ಮನ ವಿಗ್ರಹವಿದೆ.

ಗೋಮಟೇಶ್ವರನ ವಿಗ್ರಹದ ಎದುರುಗಡೆಯಿರುವ ಬ್ರಹ್ಮಸ್ತಂಭದ ಮೇಲೆ ಬ್ರಹ್ಮನನ್ನು ಪ್ರತಿಷ್ಠಾಪಿಸುತ್ತಾರೆ. ಏಕೆಂದರೆ ಬ್ರಹ್ಮನನ್ನು ಕ್ಷೇತ್ರ ರಕ್ಷಕ ಎಂದು ಜೈನ ಧರ್ಮವು ನಂಬುತ್ತದೆ. ಹಾಗಾಗಿ ಕರಾವಳಿಯ ೩ ಗೊಮ್ಮಟ ಮೂರ್ತಿಗಳ ಕ್ಷೇತ್ರದಲ್ಲೂ ಬ್ರಹ್ಮಸ್ತಂಭಗಳಿವೆ.[೪]

# ಅಧ್ಯಾಯ - ನಾಲ್ಕು

## ಸಾಂದರ್ಭಿಕ ಆಚರಣೆಗಳು

ತುಳುನಾಡಿನಲ್ಲಿ ಜೈನಮತೀಯರು ನಿತ್ಯಪೂಜೆ, ನೈಮಿತ್ತಿಕಪೂಜೆ ಮತ್ತು ವಿಶೇಷ ಪರ್ವಗಳ ಹೊರತಾಗಿ, ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಕೆಲವೊಂದು ಆಚರಣೆಗಳನ್ನು ನಡೆಸುತ್ತಾರೆ. ಇವನ್ನು ಸಾಂದರ್ಭಿಕ ಆಚರಣೆಗಳೆಂದು ಕರೆಯಬಹುದು. ಶ್ರಾವಕನೋರ್ವನು (ಜೈನಮತೀಯನು) ಸೇವಾರೂಪದಲ್ಲಿ ಇಂಥ ಆಚರಣೆಗಳನ್ನು ನಡೆಸಬಹುದು. ಅಥವಾ ತನ್ನ ಇಷ್ಟಾರ್ಥ ಪೂರೈಕೆಯ ಸಂತೃಪ್ತಿಗಾಗಿಯೂ, ನಡೆಸಬಹುದು. ಮನೆಯಲ್ಲಿ ಸಾವು ಸಂಭವಿಸಿದಾಗ, ಸೂತಕ ಕಳೆದ ಬಳಿಕ, ಆ ಮನೆಯವರು ತಮಗಾದ ದುಃಖವನ್ನು ಮರೆಯಲು ಮತ್ತು ಸತ್ತವನ ದೇಹಸಂಸ್ಕಾರಗಳಿಂದ, ತಮ್ಮ ಆತ್ಮಕ್ಕೆ ಉಂಟಾದ ದೋಷಗಳನ್ನು ನಿವಾರಿಸಿಕೊಳ್ಳಲು ಬಸದಿಯಲ್ಲಿ ಅಭಿಷೇಕ, ಸಂಘ ಸಂತರ್ಪಣೆ, ಪೂಜೆ, ಶಾಸ್ತ್ರದಾನ ಮುಂತಾದವುಗಳನ್ನು ನಡೆಸುತ್ತಾರೆ. ಇವನ್ನು ಸಾಂದರ್ಭಿಕ ಆಚರಣೆಗಳೆನ್ನಬಹುದು. ಕೆಲವು ಬಾರಿ ವಾಸಿಯಾಗದ ಕಾಯಿಲೆ ಬಂದಾಗಲೋ ಅಥವಾ ಭೀಕರವಾದ ಕಷ್ಟಗಳು ಎದುರಾದಾಗಲೋ ಅವುಗಳ ಶಮನಕ್ಕಾಗಿ ಬಸದಿಗಳಲ್ಲಿ ಬೇರೆ ಬೇರೆ ರೀತಿಯ ಆರಾಧನೆ ಪೂಜೆಗಳನ್ನು ನಡೆಸುತ್ತಾರೆ. ಉದಾಹರಣೆಗೆ, ಭೈರವ ಅರಸನು ಖಾಯಿಲೆ ಬಂದು ತೀವ್ರವಾಗಿ ಅಸ್ವಸ್ಥನಾದಾಗ, ಮೂಡಬಿದಿರೆಗೆ ಬಂದು, ಅಲ್ಲಿಯ ತ್ರಿಭುವನ ತಿಲಕ ಚೂಡಾಮಣಿ ಬಸದಿಯಲ್ಲಿ ದಾನ, ಪೂಜೆ, ಉತ್ಸವಗಳನ್ನು ನಡೆಸಿದಂತೆ ಅಲ್ಲಿಯ ಶಾಸನವು ವರ್ಣಿಸುತ್ತದೆ. ಇದು ಸಾಂದರ್ಭಿಕ ಆಚರಣೆ ಎಂದು ಹೇಳಬಹುದು.

ಈಗಾಗಲೇ ಉಲ್ಲೇಖಿಸಿದಂತೆ, ಹೊಸದಾಗಿ ಜಿನಮಂದಿರವನ್ನು ನಿರ್ಮಿಸಿದಾಗ, ಇಲ್ಲವೇ ಶಿಥಿಲವಾದ ಜಿನಮಂದಿರವನ್ನು ಜೀರ್ಣೋದ್ಧಾರಗೊಳಿಸಿದಾಗ, ಆ ಊರಿನ ಶ್ರಾವಕರೆಲ್ಲರೂ ಸೇರಿ ಜಿನನ ಪ್ರತಿಷ್ಠಾಪನೆ, ಪಂಚಕಲ್ಯಾಣ ಮಹೋತ್ಸವ ಅಥವಾ ಶುದ್ಧ ಸಂಪ್ರೋಕ್ಷಣೆಯನ್ನು ನಡೆಸುವ ಪದ್ಧತಿಯಿದೆ. ಇದೇ ರೀತಿ ಕಾರ್ಕಳ, ವೇಣೂರು, ಹಾಗೂ ಧರ್ಮಸ್ಥಳದಲ್ಲಿ ನಿರ್ಮಾಣಗೊಂಡಿರುವ ಬಾಹುಬಲಿ ಮೂರ್ತಿಗೆ ೧೨ ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕವನ್ನು ನಡೆಸುತ್ತಾರೆ. ಇವೆಲ್ಲವೂ ಸಾಂದರ್ಭಿಕ ಆಚರಣೆಗಳಲ್ಲಿ ಸೇರುತ್ತವೆ. ರತ್ನಾಕರ ವರ್ಣಿಯು ಸಾಂದರ್ಭಿಕ ಆಚರಣೆಗಳ ಬಗ್ಗೆ ಈ ರೀತಿ ಪ್ರಸ್ತಾಪಿಸಿದ್ದಾನೆ. ಭೂಕಂಪ, ಸೂರ್ಯಗ್ರಹಣ, ಚಂದ್ರ ಗ್ರಹಣ, ಕ್ಷಾಮ, ಗ್ರಹಗಳ ಪೀಡೆ, ವ್ಯಂತರ ದೇವತೆಗಳ ಭೀತಿ, ರೋಗ ದುಃಖ, ಗೋವುಗಳ ಸಮೂಹಕ್ಕೆ, ಮನುಷ್ಯರಿಗೆ, ಆನೆ, ಕುದುರೆಗಳಿಗೆ, ಕ್ರೂರವಾದ ರೋಗವು ಬಂದಾಗ, ದುಃಸ್ವಪ್ನವು ಬಿದ್ದಾಗ, ಇನ್ನೂ ಅನೇಕ ರೀತಿಯ ದುಃಖಗಳು ಬಂದಾಗ ಇವುಗಳ ನಿವಾರಣೆಗೆ ಮಹಾಭಿಷೇಕ - ಕಲಿಕುಂಡ ಯಂತ್ರಗಳ ಆರಾಧನೆ - ಸಂಘ ಪೂಜಾ ಕಾರ್ಯಗಳನ್ನು ರಾಜನು ನಡೆಸಬೇಕೆಂದು ತಿಳಿಸುತ್ತಾನೆ. ಶ್ರಾವಕನು ಯಾವುದೇ ಆರಾಧನೆ, ಪೂಜೆಯನ್ನು ನಡೆಸಿದರೂ, ಕೀರ್ತಿಯ ಆಸೆಗಾಗಿ ಮಾಡಕೂಡದು. ಭಾವ ಶುದ್ಧಿಯಿಂದ ಮಾಡಬೇಕು. ಭಾವ ಶುದ್ಧಿಯಿಲ್ಲದ ಯಾವುದೇ ಪೂಜೆಯನ್ನು ಜೈನ ಧರ್ಮವು ಒಪ್ಪುವುದಿಲ್ಲ. ತುಳುನಾಡಿನ ಜೈನ ಮತೀಯರು ಆಚರಿಸುವ ಸಾಂದರ್ಭಿಕ ಆಚರಣೆಗಳನ್ನು ಹೀಗೆ ವಿಂಗಡಿಸಬಹುದು.

೧. ಪ್ರತಿಷ್ಠಾ ವಿಧಿ
೨. ಪಂಚಕಲ್ಯಾಣ ಮಹೋತ್ಸವ
೩. ಮಹಾಮಸ್ತಕಾಭಿಷೇಕ
೪. ನೋಂಪಿ ವ್ರತಗಳು - ಶಕ್ತಿ ಆರಾಧನೆ

## ೪.೧ ಪ್ರತಿಷ್ಠಾ ವಿಧಿ

ಪ್ರತಿಷ್ಠಾವಿಧಿ ಪಂಚಕಲ್ಯಾಣ ಮಹೋತ್ಸವಗಳೆಲ್ಲವೂ ಇಲ್ಲಿಯ ಜೈನರ ವೈಶಿಷ್ಟ್ಯವೇ ಆಗಿದೆ. ಇವನ್ನು ವೈಯಕ್ತಿಕವಾಗಿ ನಡೆಸಲಿ, ಸಾರ್ವಜನಿಕವಾಗಿ ನಡೆಸಲಿ, ಇದರಿಂದ ಆತ್ಮೋನ್ನತಿಯಾಗಿ ಸದ್ಗತಿ ಸಿಗಲೆಂಬ ಉದ್ದೇಶದಿಂದ ಆಚರಿಸುತ್ತಾರೆ. ಇಂಥ ಪುಣ್ಯ ಕಾರ್ಯಕ್ಕೆ ದಾನ ನೀಡುವುದು, ಆ ಕಲಾಪವನ್ನು ವೀಕ್ಷಿಸುವುದು ಕೂಡ ತಮ್ಮ ಪಾಲಿನ ಪುಣ್ಯವೆಂದು ಜನರು ಭಾವಿಸುತ್ತಾರೆ. ಜೈನ ಶಾಸ್ತ್ರದಲ್ಲಿ ವಿವರಿಸಲ್ಪಟ್ಟಂತೆ, ಪ್ರತಿಷ್ಠಾವಿಧಿಗಳು ನಡೆಯುತ್ತವೆ. ಇದರಲ್ಲಿ ಪ್ರಾದೇಶಿಕ ಭಿನ್ನತೆಗಳಿಗೆ ಅವಕಾಶವಿಲ್ಲ. ಇಲ್ಲಿ ೩ ವಿಧದ ಪ್ರತಿಷ್ಠೆಗಳು ಆಚರಣೆಯಲ್ಲಿವೆ.

೧. ವ್ಯಾಸ ಪ್ರತಿಷ್ಠೆ
೨. ಮಧ್ಯಮ ಪ್ರತಿಷ್ಠೆ
೩. ಲಘು ಪ್ರತಿಷ್ಠೆ

ವ್ಯಾಸ ಪ್ರತಿಷ್ಠೆಯನ್ನು ಒಂಬತ್ತು ಇಲ್ಲವೇ ೧೫ ದಿನಗಳವರೆಗೆ ನಡೆಸುತ್ತಾರೆ. ಪ್ರತಿಷ್ಠಾಪಕನು ಆರ್ಥಿಕತೆಗೆ ಅನುಕೂಲವಾಗುವಂತೆ ಈ ಮೂರರಲ್ಲಿ ಯಾವುದಾದರೂ ಒಂದು ವಿಧಾನವನ್ನು ಅನುಸರಿಸುತ್ತಾನೆ.

ಮಧ್ಯಮ ಪ್ರತಿಷ್ಠೆಯು ೭ ದಿನಗಳು ಅಥವಾ ೫ ದಿನಗಳಲ್ಲಿ ನಡೆಸುತ್ತಾರೆ. ಇದು ಪಂಚಕಲ್ಯಾಣ ವಿಧಿಯ ಪ್ರಕಾರ ನಡೆಸುತ್ತಾರೆ. ಲಘು ಪ್ರತಿಷ್ಠೆಯು ೩ ದಿನಗಳಲ್ಲಿ ಸಂಕಲ್ಪ ಪೂರ್ವಕವಾಗಿ ಎಲ್ಲಾ ವಿಧಿಗಳನ್ನು ಸಂಕ್ಷಿಪ್ತವಾಗಿ ಮಾಡಿ ಮೂರ್ತಿಯನ್ನು ಪ್ರತಿಷ್ಠಾಪಿಸುವುದಕ್ಕೆ ಲಘು ಪ್ರತಿಷ್ಠೆ ಎನ್ನುವರು.

ಶ್ರಾವಕರು ಯಾವುದೇ ಪ್ರತಿಷ್ಠಾವಿಧಾನವನ್ನು ಆಚರಿಸಿಕೊಳ್ಳಲು ಆದರೆ ಆ ಸಂದರ್ಭದಲ್ಲಿ ನಡೆಯುವ ಧಾರ್ಮಿಕ ಕಲಾಪಗಳು ಮಾತ್ರ ಒಂದೇ ರೀತಿಯಲ್ಲಿರುತ್ತವೆ. ಉದಾ : ಅಂಕುರಾರ್ಪಣ, ವೇದಿಕೆ ನಿರ್ಮಾಣ, ಮಂಟಪ ಶುದ್ಧಿ, ವಾಸ್ತುಬಲಿ, ಧ್ವಜಾರೋಹಣ, ಭೇರಿತಾಡನ, ಜಲಯಾತ್ರಾ ಮಹೋತ್ಸವ, ಗರ್ಭಾವತರಣ ಕಲ್ಯಾಣ, ಧಾಮಸಂಪ್ರೋಕ್ಷಣೆ ಅಥವಾ ವಿಮಾನ ಶುದ್ಧಿ, ಜನ್ಮಾಭಿಷೇಕ ಕಲ್ಯಾಣ, ಪರಿ ನಿಷ್ಕ್ರಮಣ ಕಲ್ಯಾಣ, ಕೇವಲ ಜ್ಞಾನ ಕಲ್ಯಾಣ, ನಿರ್ವಾಣ ಕಲ್ಯಾಣ, ಅವಭೃತ ಸ್ನಾನ ಹೀಗೆ ಕ್ರಿಯೆಗಳು ಜರಗುತ್ತವೆ. ಜೈನಧರ್ಮದಲ್ಲಿ ಬರುವ 24 ತೀರ್ಥಂಕರರಲ್ಲಿ, ಯಾವುದೇ ತೀರ್ಥಂಕರನ ಪ್ರತಿಷ್ಠಾ ಮಹೋತ್ಸವ ನಡೆದರೂ ಈ ಧಾರ್ಮಿಕ ಕ್ರಿಯೆಗಳಲ್ಲಿ ಯಾವ ವ್ಯತ್ಯಾಸವೂ ಕಂಡು ಬರುವುದಿಲ್ಲ.

## ೪. ೨ - ಪಂಚ ಕಲ್ಯಾಣ ಮಹೋತ್ಸವ

ಪ್ರತಿ ತೀರ್ಥಂಕರರ ಪ್ರತಿಷ್ಠಾ ಕಾರ್ಯವು ನಡೆಯಬೇಕಾದರೂ ಆ ತೀರ್ಥಂಕರರ ಜನ್ಮ ನಕ್ಷತ್ರಕ್ಕೆ ಹೊಂದಿಕೊಳ್ಳುವ ಹಾಗೆ ಧಾರ್ಮಿಕ ಕ್ರಿಯೆಗಳನ್ನು ಸಂಯೋಜಿಸುತ್ತಾರೆ. ಯಜ್ಞಮಂಟಪದ ಹತ್ತಿರ ಅಂಕುರಾರ್ಪಣ ವಿಧಿಯೊಡನೆ ಕ್ರಿಯೆಗಳು ಆರಂಭಗೊಳ್ಳುತ್ತದೆ. ಈ ವಿಧಿಯಲ್ಲಿ ಶುದ್ಧವಾಗಿರುವ ನವಧಾನ್ಯಗಳನ್ನು ಮೊದಲಿನ ದಿನ ನೀರಿನಲ್ಲಿ ನೆನೆಸಿ, ಮರುದಿನ ಸುಡುಮಣ್ಣು, ಒಣಗೊಬ್ಬರಗಳನ್ನು ಅದಕ್ಕೆ ಬೆರೆಸಿ ಅದನ್ನು ಅಗಲವಾದ ಬಾಂಡ ಅಥವಾ ಕುಂಭಗಳಲ್ಲಿ ಮಂತ್ರಪೂರ್ವಕವಾಗಿ ಬಿತ್ತುತ್ತಾರೆ. ನಂತರ ಅದಕ್ಕೆ ಗಂಧೋದಕವನ್ನು ಎರೆಯುತ್ತಾರೆ. ಯಾಗ ವೇದಿಕೆಯ ಪಾವಿತ್ರ್ಯಕ್ಕೆ ಮತ್ತು ಶೋಭೆಗೆ ಈ ಕ್ರಿಯೆಯನ್ನು ನಡೆಸಲಾಗುತ್ತದೆಂದು ಹೇಳಲಾಗಿದ್ದರೂ ಪ್ರಕೃತಿಯ ಸೃಷ್ಟಿ ಕ್ರಿಯೆಯನ್ನೂ ಅದರ ಅದ್ಭುತ ಮತ್ತು ವಿಸ್ಮಯಗಳನ್ನೂ ಧಾರ್ಮಿಕ ಆಚರಣೆಯ ಮೂಲಕ ಗೌರವಿಸುವ ವಿಧಾನವೆಂದು ಹೇಳಬಹುದು. ಮಾನವನ ಇತಿಹಾಸದಲ್ಲಿ ಈ ಕ್ರಿಯೆಗೆ ಮಹತ್ವದ ಸ್ಥಾನವಿದೆ. ಭಾರತೀಯ ಸಂಸ್ಕೃತಿಯಲ್ಲಿ ಇದು ಪವಿತ್ರವಾದ ಕ್ರಿಯೆಯೆಂದು ಪರಿಗಣಿಸಲ್ಪಟ್ಟಿದೆ. ಈ ದೇಶದ ಮೂಲ ಜನಾಂಗಗಳಲ್ಲಿ ಸುಪ್ತವಾಗಿ ಹುದುಗಿದ್ದ ನಂಬಿಕೆಗಳು, ಕಾಲಕ್ರಮೇಣ ಬೇರೆ ಬೇರೆ ಜನಾಂಗಗಳಲ್ಲಿ ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡು ಬೆಳೆದು ಬಂದವು.

ಮುಂದೆ ಮಂಟಪಶುದ್ಧಿ, ವೇದಿಕೆ ನಿರ್ಮಾಣ ಕಾರ್ಯಗಳು ನಡೆಯುತ್ತವೆ. ಯಜ್ಞ ಯಾಗಾದಿ ಕಾರ್ಯಗಳಿಗೆ ಮೀಸಲಾದ ಸ್ಥಳಕ್ಕೆ ವೇದಿಗೆ ಎಂಬ ಹೆಸರು. ಅಲ್ಲಿ ಪಂಚವರ್ಣಗಳಿಂದ ವಿವಿಧ ರೀತಿಯ ಮಂಡಲಗಳನ್ನು ಬರೆದು ಪಂಚ ಕುಂಭ ಸ್ಥಾಪನೆ ಮಾಡಿ ವಾಸ್ತುಬಲಿಯನ್ನು ನಡೆಸುತ್ತಾರೆ. ವಾಸ್ತುಬಲಿ ಪ್ರತಿಷ್ಠಾ ವಿಧಾನದ ಬಹುಮುಖ್ಯವಾದ ಭಾಗವಾಗಿದೆ. ಸಿಡಿಲು, ಅಗ್ನಿಪ್ರಕೋಪ, ಮಳೆ, ಗಾಳಿ, ಮುಂತಾದ ಆಕಸ್ಮಿಕಗಳಿಂದ ಬಸದಿಗೆ ಒದಗಬಹುದಾದ ಸರ್ವವಿಘ್ನಗಳನ್ನು ಹೋಗಲಾಡಿಸುವ ಉದ್ದೇಶದಿಂದ ಮತ್ತು ಬಸದಿಯ ಸರ್ವರಕ್ಷಣೆಗಾಗಿ ೪೮ ಜನ ವಾಸ್ತು ದೇವತೆಗಳನ್ನು ವಿಧಿಪೂರ್ವಕವಾಗಿ ಆಹ್ವಾನಿಸಿ, ಪೂಜೆ, ಆರಾಧನೆಗಳಿಂದ ತೃಪ್ತಿಪಡಿಸುವ ಉದ್ದೇಶದಿಂದ ಈ ಕ್ರಿಯೆಯನ್ನು ನಡೆಸುತ್ತಾರೆ. ತೀರ್ಥಂಕರರ ಸಮವಸರಣ ಸಂದರ್ಭದಲ್ಲಿ ಧರ್ಮಚಕ್ರವನ್ನು ಹೊತ್ತ ಸರ್ವಾಹ್ಣಯಕ್ಷನು ಎತ್ತರದ ಸ್ತಂಭದ ಮೇಲೆ ಕುಳಿತು ಭೇರಿಯನ್ನು ಬಾರಿಸುತ್ತ ಲೋಕದ ಸಮಸ್ತ ಜೀವಿಗಳನ್ನೂ ಆಹ್ವಾನಿಸುತ್ತಾನೆ. ತೀರ್ಥಂಕರರ ದಿವ್ಯಧ್ವನಿ ಮೊಳಗುವುದೆಂದೂ ಎಲ್ಲಾ ಜೀವಿಗಳು ಬಂದು ಉಪದೇಶವನ್ನು ಆಲಿಸಿ ತಮ್ಮ ಆತ್ಮ ಕಲ್ಯಾಣವನ್ನು ಮಾಡಿಕೊಳ್ಳಬೇಕೆಂದೂ ಕೂಗಿ ಕೂಗಿ ಕರೆಯುತ್ತಾನೆ. ಇದರ ಸಂಕೇತವಾಗಿ ಮಾಡುವ ಆಚರಣೆಯೇ ಧ್ವಜಾರೋಹಣ ಮತ್ತು ಭೇರಿತಾಡನ ಕ್ರಿಯೆಗಳಾಗಿವೆ. ಹೀಗಾಗಿ ಜೈನಮತೀಯರು ಧ್ವಜದಲ್ಲಿ ಧರ್ಮಚಕ್ರವನ್ನು ತಲೆಯಮೇಲೆ ಹೊತ್ತುನಿಂತ ಸರ್ವಾಹ್ಣಯಕ್ಷನ ಚಿತ್ರವನ್ನು ಬಿಡಿಸುತ್ತಾರೆ.

ನಂತರ ಜಿನನಿಗೆ ಗರ್ಭಾವತರಣ ಕಲ್ಯಾಣ, ಜನ್ಮಾಭಿಷೇಕ ಕಲ್ಯಾಣ, ದೀಕ್ಷಾ ಕಲ್ಯಾಣ, ಕೇಶಲೋಚನಾ ಕ್ರಮ ಹಾಗೂ ಕೊನೆಯದು, ನಿರ್ವಾಣ ಕಲ್ಯಾಣ ವಿಧಿಗಳನ್ನು ನೆರವೇರಿಸಿದ ಬಳಿಕ ಯಾಗಮಂಟಪದಲ್ಲಿ ತೀರ್ಥಂಕರರ ಬಿಂಬವನ್ನು ಇಟ್ಟು ಅಷ್ಟಗುಣಗಳ ಪ್ರತ್ಯೇಕ ಪೂಜೆಯನ್ನು ಹಾಗೆಯೇ ಶುದ್ಧಭಕ್ತಿ, ಶ್ರುತಭಕ್ತಿ, ಚಾರಿತ್ರ್ಯ ಭಕ್ತಿ,

ಯೋಗ ಭಕ್ತಿ, ಶಾಂತಿ ಭಕ್ತಿ ಮತ್ತು ನಿರ್ವಾಣ ಭಕ್ತಿಗಳನ್ನು ವ್ಯಕ್ತಪಡಿಸಿ ಅಭಿಷೇಕ ವಿಧಿಯನ್ನು ನೆರವೇರಿಸುತ್ತಾರೆ. ಅನಂತರ ಶ್ರುತಪೂಜೆ, ಗಂಗಾಪೂಜೆಯನ್ನು ಮಾಡಿ, ಮಾರನೆಯ ದಿನ ಅವಭೃತ ಸ್ನಾನ, ಮಹಾ ಹೋಮ, ಧ್ವಜಾವರೋಹಣ, ಕಂಕಣವಿಸರ್ಜನೆ ಮೊದಲಾದ ಕ್ರಿಯೆಗಳನ್ನು ಮಾಡಿ ಪ್ರತಿಷ್ಠಾವಿಧಿಯನ್ನು ಪೂರೈಸುತ್ತಾರೆ. ಇದರ ಅಂಗವಾಗಿ ಶ್ರೀಬಲಿ ಉತ್ಸವ, ಧರ್ಮೋಪದೇಶಗಳೂ ಜರುಗುತ್ತವೆ. ಇದು ಪಂಚಕಲ್ಯಾಣ ಮಹೋತ್ಸವ ನಡೆಯುವ ವಿಧಾನವಾಗಿದೆ.

## ೪. ೩ - ಮಹಾಮಸ್ತಕಾಭಿಷೇಕ

ಮಹಾಮಸ್ತಕಾಭಿಷೇಕವನ್ನು ಸಾಮಾನ್ಯವಾಗಿ ಬಾಹುಬಲಿಗೆ ಮಾಡುತ್ತಾರೆ. ಬಾಹುಬಲಿಯು ತೀರ್ಥಂಕರನಲ್ಲ. ಇವನು ಪ್ರಥಮ ತೀರ್ಥಂಕರನಾದ ವೃಷಭದೇವನ ಮಗನಾಗಿದ್ದು, ಕೇವಲ ಜ್ಞಾನವನ್ನು ಪಡೆದು ಮೊಟ್ಟಮೊದಲು ಮೋಕ್ಷಕ್ಕೆ ಹೋದವನು. ಈ ಕಾರಣದಿಂದ ಜೈನ ಮತೀಯರು ಬಾಹುಬಲಿಯನ್ನು ವಿಶೇಷವಾಗಿ ಗೌರವಿಸಿ ಪೂಜಿಸುತ್ತಾರೆ. ತೀರ್ಥಂಕರನಂತೆ ಇವನಿಗೆ ಪಂಚಕಲ್ಯಾಣ ಮಹೋತ್ಸವವನ್ನು ಆಚರಿಸುವುದಿಲ್ಲ. 12 ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕವನ್ನು ಮಾತ್ರ ಆಚರಿಸುತ್ತಾರೆ. ಸಾಮಾನ್ಯವಾಗಿ ಇಂಥ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಬಾಹುಬಲಿಗೆ ದೀಕ್ಷಾ ಕಲ್ಯಾಣ, ಕೇವಲಜ್ಞಾನ ಕಲ್ಯಾಣ, ನಿರ್ವಾಣ ಕಲ್ಯಾಣ ಈ ಮೂರನ್ನು ಮಾತ್ರ ಆಚರಿಸುತ್ತಾರೆ. ಪಂಚಕಲ್ಯಾಣ ವಿಧಿಯನ್ನು ಪ್ರತ್ಯೇಕವಾಗಿ ಯಾವುದಾದರೂ ತೀರ್ಥಂಕರರಿಗೆ ಮಾತ್ರ ಮಾಡುತ್ತಾರೆ.

## ೪. ೪ - ಶಕ್ತಿ ಆರಾಧನೆ ಮತ್ತು ನೋಂಪಿ ವ್ರತಗಳು

ತುಳುನಾಡಿನಲ್ಲಿ ಜೈನರ ಆರಾಧನೆಗಳಲ್ಲಿ ಶಕ್ತಿಯ ಆರಾಧನೆಯು ಬಹುಮುಖ್ಯವಾದುದು. ಇದನ್ನು ನೋಂಪಿ ಆಚರಣೆಗಳಲ್ಲಿ ಗುರ್ತಿಸಬಹುದು. ಮಾತೃ ಶಕ್ತಿ ಆರಾಧನೆಯ ಪರಿಕಲ್ಪನೆ ತೀರ ಪ್ರಾಚೀನವಾದುದು. ಇದು ಮೂಲ ದ್ರಾವಿಡ ಕಾಲದಿಂದಲೂ ಬೆಳೆದುಬಂದ ಪದ್ಧತಿಯಾಗಿದ್ದು, ಸಿಂಧೂ ತೀರದ ನಾಗರಿಕತೆಯಲ್ಲಿ ಇದರ ಸೂಚನೆ ದೊರೆತಿದೆ. ಮುಂದೆ ಆರ್ಯ ಸಂಸ್ಕೃತಿಯೂ ಇದನ್ನು ಅಳವಡಿಸಿಕೊಂಡಿತು. ತುಳುನಾಡಿನ ಭೂತಾರಾಧನೆಯಲ್ಲಿ ಬರುವ ಸ್ತ್ರೀಭೂತಗಳಾದ ಉಳ್ಳಾಳ್ತಿ, ರಕ್ತೇಶ್ವರಿ, ಜೂಮಾದಿ, ನಾಗಂತಾಯಿ, ಕಲ್ಲುರ್ಟಿ, ಚಾಮುಂಡಿ ಮುಂತಾದ ಮಾತೃಶಕ್ತಿಯ ರೂಪಗಳೇ ಆಗಿರುವುದನ್ನು ಇಲ್ಲಿ ಸ್ಮರಿಸಬಹುದು. ಜಾನಪದೀಯವಾಗಿ ಬೆಳೆದುಬಂದಿದ್ದ ಭೂತಾರಾಧನೆಯನ್ನು ಸ್ವೀಕರಿಸುವ ಮೂಲಕ ಮಾತೃಶಕ್ತಿಯ ಆರಾಧನೆಯನ್ನು ಜೈನಧರ್ಮವು ಈ ಮೊದಲೇ ಸ್ವೀಕರಿಸಿತ್ತು. ಇದರ ಜೊತೆಗೆ ಕ್ರಿ. ಶ. ಆರಂಭ ಕಾಲದಿಂದಲೂ ತಿರ್ಥಂಕರರ ಜೊತೆಗೆ ಆತನ ಶಾಸನ ದೇವತೆಗಳಾದ ಯಕ್ಷ-ಯಕ್ಷಿಯರನ್ನು ಪೂಜಿಸುವ ಸಂಪ್ರದಾಯವು ಬೆಳೆದುಬಂದಿತ್ತು. ಮುಂದೆ ಇದು ಯಕ್ಷಿಯರನ್ನು ಪೂಜಿಸುವ ಸಂಪ್ರದಾಯಕ್ಕೂ ಎಡೆ ಮಾಡಿಕೊಟ್ಟಿತ್ತು. ಆ ಬಳಿಕ ನೋಂಪಿ ಆಚರಣೆಯಲ್ಲಿ ಇದಕ್ಕೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ಚಾಲನೆ ದೊರೆಯಿತು.

ತುಳುನಾಡಿನಲ್ಲಿ ಜೈನಮತವು ಈ ವ್ರತವನ್ನು ವಿಶಿಷ್ಟವಾಗಿ ಆಚರಿಸಿಕೊಂಡು ಬಂದಿರುವುದಕ್ಕೆ ಈ ಭಾಗದ

ಕಾವ್ಯ, ಶಾಸನಗಳಲ್ಲಿ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಕವಿ ಕಲ್ಯಾಣಕೀರ್ತಿ ನಾಗಕುಮಾರ ಚರಿತೆ ಮತ್ತು ಬಾಹುಬಲಿ ಕವಿಯ ನಾಗಕುಮಾರ ಚರಿತೆ ಗ್ರಂಥಗಳು ಶ್ರೀಪಂಚಮಿ ನೋಂಪಿಗೆ ಮೀಸಲಾದ ಕೃತಿಗಳಾಗಿವೆ. ರತ್ನಾಕರನ ಭರತೇಶ್ವವೈಭವ ಸಾಳ್ವ ಕವಿಯ ಸಾಳ್ವ ಭಾರತ ಕಾವ್ಯಗಳಲ್ಲಿಯೂ ಇದರ ಉಲ್ಲೇಖವಿದೆ. ಈ ಭಾಗದಲ್ಲಿ ನಿರ್ಮಾಣಗೊಂಡಿರುವ ಸುಮಾರು ನೂರತೊಂಬತ್ತೊಂದು ಬಸದಿಗಳು ಹಾಗೂ ಅಲ್ಲಿರುವ ಸಾವಿರಾರು ಜಿನಬಿಂಬಗಳು ನೋಂಪಿಯ ಜನಪ್ರಿಯತೆಯನ್ನು ನಮಗೆ ಸಾರಿ ಹೇಳುತ್ತವೆ. ಏಕೆಂದರೆ, ಯಾವುದೇ ನೋಂಪಿಯನ್ನು ಆಚರಿಸಿದರೂ, ಅದರ ಉದ್ಯಾಪನೆಯ (ಮುಕ್ತಾಯದ) ಸಂದರ್ಭದಲ್ಲಿ ಯಕ್ಷ - ಯಕ್ಷಿಯರು ಸಹಿತರಾಗಿರುವ ಜಿನಬಿಂಬವನ್ನು ಬಸದಿಗೆ ದಾನ ನೀಡಬೇಕೆಂಬ ವಿಧಿಯಿದೆ. ಹೀಗಾಗಿ ಕಾರ್ಕಳ, ಮೂಡಬಿದಿರೆ, ವರಾಂಗ, ಬೆಳ್ತಂಗಡಿ, ಪುತ್ತೂರು ಬಸದಿಗಳಲ್ಲಿ ಕಂಡುಬರುವ ಅನೇಕ ಜಿನಪ್ರತಿಮೆಗಳ ಪೀಠದಲ್ಲಿ ಬರೆದಿರುವ ಶಾಸನಗಳನ್ನು ಗಮನಿಸಿದರೆ, ಈ ಅಂಶವು ಸ್ಪಷ್ಟವಾಗುತ್ತದೆ. ಉದಾ : ಮೂಡಬಿದಿರೆ ಹೊಸ ಬಸದಿಯಲ್ಲಿರುವ ಚಂದ್ರಪ್ರಭ ತೀರ್ಥಂಕರನ ಪೀಠದಲ್ಲಿ ಕುಂಜಣ್ಣ ಶೆಟ್ಟಿಯ ಸೊಸೆಯಾದ ಪಕ್ಕಳದಾರು ಎನ್ನುವವಳು ಚಂದನ ಷಷ್ಠಿನೋಂಪಿಯನ್ನು ಆಚರಿಸಿದಂತೆ ಹೇಳಲಾಗಿದೆ. ಇನ್ನೊಂದು ಬೆಟ್ಟಕ್ಕೇರಿ ಬಸದಿಯ ಜಿನಬಿಂಬವೊಂದರಲ್ಲಿ ಕೋಟಿ ಸೆಟ್ಟಿಯೆನ್ನುವವನು ಕರ್ಮನಿರ್ಜರೆ ನೋಂಪಿಯನ್ನು ಮಾಡಿದಂತೆ ಉಲ್ಲೇಖವಿದೆ. ಇದೇ ರೀತಿ ಅನಂತನೋಂಪಿ, ಶ್ರೀ ಪಂಚಮಿನೋಂಪಿ, ನಂದೀಶ್ವರ ನೋಂಪಿ, ಜೀವದಯಾಷ್ಟಮಿ ನೋಂಪಿ, ಹೀಗೆ ಇನ್ನೂ ಅನೇಕ ನೋಂಪಿಗಳ ಉಲ್ಲೇಖಗಳು ಕಂಡುಬರುತ್ತದೆ.

ಕರಾವಳಿ ಜಿಲ್ಲೆಯಲ್ಲಿ ಜೈನಮತೀಯರು ಹೆಚ್ಚಾಗಿ ಭೂಮಾಲಿಕರಾಗಿರುತ್ತಾರೆ. ಕೃಷಿ ಅವರ ಮುಖ್ಯವಾದ ಕಸುಬು ಆಗಿರುವುದರಿಂದ, ಹೊಸತೆನೆ ತರುವುದು, ಹೊಸ ಅಕ್ಕಿ ಊಟ, ದೀಪಾವಳಿ ಆಚರಣೆ, ಜನಿವಾರ ಹಾಕುವ ಹಬ್ಬ ಮುಂತಾದ ಹಬ್ಬಗಳನ್ನು ಅವರ ಮನೆಗಳಲ್ಲಿ ಆಚರಿಸುತ್ತಾರೆ.

ತುಳುನಾಡಿನಲ್ಲಿ ಭೂತಾರಾಧನೆಯು ಒಂದು ಮುಖ್ಯ ಆರಾಧನೆಯಾಗಿದೆ. ಜೈನರು ಇದರಿಂದ ಹೊರತಲ್ಲ. ಕೆಲವು ಮನೆಗಳಲ್ಲಿ ಪ್ರತಿ ವರ್ಷವೂ ಭೂತದ ನೇಮೋತ್ಸವ, ಪರ್ವ, ತಂಬಿಲ, ಮುಂತಾದ ಕಾರ್ಯಗಳನ್ನು ನಡೆಸುತ್ತಾರೆ.

ಕೆಲವು ಬಸದಿಗಳಲ್ಲಿಯೂ ಹೊರಗೆ ಭೂತದ ಗುಡಿ, ಅಥವಾ ಸ್ಥಾನಗಳು ಇರುತ್ತವೆ. ಹಿಂದಿನ ಪರಂಪರೆಯ ಪ್ರಕಾರ ಅವುಗಳನ್ನು ಆರಾಧಿಸಿಕೊಂಡು ಬರುತ್ತಿದ್ದಾರೆ.[೧೮]

# ಅಧ್ಯಾಯ - ಐದು

## ಮಹಾಮಸ್ತಕಾಭಿಷೇಕ ಅರ್ಥ ಮತ್ತು ಸ್ವರೂಪ

'ಅಭಿಷವ' ಎಂಬ ಶಬ್ದದಿಂದ 'ಅಭಿಷೇಕ' ಎಂಬ ಶಬ್ದ ಬಂದಿದೆ. ಸರ್ವಾರ್ಥ ಸಿದ್ಧಿಯಲ್ಲಿ ಪೂಜ್ಯಪಾದರು ದ್ರವ್ಯೋವೃಷ್ಯೋವಾಭಿಷವಃ ಎಂದು ಹೇಳಿದ್ದಾರೆ. ಇದಕ್ಕೆ ಸ್ನಾನ, ಯಜ್ಞಕ್ಕೆ ಸಂಬಂಧಿಸಿದ ಸ್ನಾನ ಮೊದಲಾದ ಅರ್ಥವಾಗುತ್ತದೆ. ಯಜ್ಞವೆಂದರೆ ಪೂಜೆಯೆಂದಾಗುತ್ತದೆ. ಬಾಹುಬಲಿ ಸ್ವಾಮಿಗೆ ಪೂಜೆಮಾಡುವ ಸಮಯದಲ್ಲಿ, ಜಲಾದಿ ಉತ್ತಮ ದ್ರವ್ಯಗಳಿಂದ ಸ್ನಾನ ಮಾಡಿಸುವುದಕ್ಕೆ ಅಭಿಷೇಕವೆಂದು ಹೆಸರಾಗುತ್ತದೆ. ಮಹಾಮಸ್ತಕಾಭಿಷೇಕವೆಂದರೆ, ತಲೆಯ ಮೇಲಿನಿಂದ ಮಾಡಿಸುವ ಅಭಿಷೇಕವೆಂದಾಗುತ್ತದೆ. ಸಾಮಾನ್ಯವಾಗಿ 5 ಅಥವಾ 6 ಅಡಿಗಳ ಮೂರ್ತಿಗೆ ಮಾಡಿಸುವ ಅಭಿಷೇಕವಾಗಿದ್ದರೆ ಅಷ್ಟೇನೂ ಪ್ರಾಶಸ್ತ್ಯವಿರುತ್ತಿರಲಿಲ್ಲ. ಆದರೆ ಅತ್ಯುನ್ನತ, ಭವ್ಯ ಮೂರ್ತಿಯಾಗಿದ್ದು, ಲೋಕ ಪ್ರಸಿದ್ಧವಾಗಿದ್ದು, ಲಕ್ಷಾಂತರ ಹಣದ ವ್ಯಯದಿಂದ ಮಾಡಿಸುವ ಅಭಿಷೇಕವಾಗಿರುವುದರಿಂದ ಇದಕ್ಕೆ ಹೆಚ್ಚು ಪ್ರಾಶಸ್ತ್ಯ ಬಂದಿದೆ.

ಜೈನ ಸಂಸ್ಕೃತಿಯ ಪ್ರಕಾರ ಪೂಜೆಯು ದ್ರವ್ಯ ಪೂಜೆ ಮತ್ತು ಭಾವ ಪೂಜೆ ಎಂಬ ಎರಡು ಬಗೆಯಾಗುತ್ತದೆ. ಜೈನ ಧರ್ಮಾನುಯಾಯಿಗಳಲ್ಲೇ ದ್ರವ್ಯ ಪೂಜೆಗೆ ಕೆಲವು ಪಂಥಗಳು ಪ್ರಾಶಸ್ತ್ಯ ನೀಡಿದರೆ, ಮತ್ತೆ ಕೆಲವು ಪಂಥಗಳು ಭಾವ ಪೂಜೆಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಾರೆ. ದ್ರವ್ಯ ಪೂಜೆಯಲ್ಲಿ ಉಪಯೋಗಿಸುವ ವಸ್ತುಗಳು ಸೂಕ್ಷ್ಮ ಹಿಂಸೆಗೆ ಕಾರಣವಾಗಿರುವುದರಿಂದ ಅದನ್ನು ಮಾಡುವುದು ಪಾಪಕ್ಕೆ ಕಾರಣವಾಗುತ್ತದೆಂದು ಕೆಲವರ ಅಭಿಪ್ರಾಯ ವಾಗಿರುತ್ತದೆ. ಜೈನಧರ್ಮವು ಪರಮ ಅಹಿಂಸಾ ಧರ್ಮವಾಗಿರುವುದರಿಂದಲೂ, ಸೂಕ್ಷ್ಮ ಜಂತುಗಳ ಹಿಂಸೆಯಾದರೂ ಅದು ಹಿಂಸೆಯೇ ಅಗುವುದೆಂದೂ, ಅದು ಸಿದ್ಧಾಂತಕ್ಕೆ ವಿರೋಧವಾಗುವುದೆಂದೂ ದ್ರವ್ಯ ಪೂಜೆಯ ವಿರೋಧಿಗಳ ಅಭಿಪ್ರಾಯವಾಗಿದೆ.

ಈ ಬಗೆಯ ದ್ರವ್ಯ ಪೂಜಾರೂಪದ ಅಭಿಷೇಕ ಮಾಡುವುದು ವೈಜ್ಞಾನಿಕವಾಗಿಯೂ ಉತ್ತಮವೆಂದು ಒಂದು ಅಭಿಪ್ರಾಯವಿದೆ. ಹಾಲು, ಮೊಸರು ಮೊದಲಾದ ಜಿಡ್ಡಿನ ಪದಾರ್ಥಗಳು ಶಿಲೆಯ ವಿಗ್ರಹಗಳ ಮೇಲೆ ಆಗಿಂದಾಗ್ಗೆ ಬೀಳುವುದರಿಂದ ಶಿಲೆಯು ಕೆಡದೆ ಉತ್ತಮವಾಗಿರುವುದೆಂದು ವಿಜ್ಞಾನಿಗಳ ಅಭಿಮತವಾಗಿದೆ. ಅಲ್ಲದೆ ಇದರಿಂದ ಮೂರ್ತಿಗಳ ಕಾಂತಿಯೂ ಹೆಚ್ಚುತ್ತದೆ. ಜೈನ ಧರ್ಮಿಯರು ಚಂದನ - ಗಂಧ ಮೊದಲಾದ ಸುಗಂಧ ವಸ್ತುಗಳನ್ನು ಮಿಶ್ರಮಾಡಿ ಶ್ರೀಗಂಧ ದ್ರವ್ಯವನ್ನು ಸಿದ್ಧಗೊಳಿಸಿ 'ಗಂಧಾಭಿಷೇಕ'ವನ್ನು ಮಾಡುತ್ತಾರೆ. ಬೇರೆಯ ಅಭಿಷೇಕಗಳಿಗಿಂತ ಇದಕ್ಕೆ ಮಹತ್ವವನ್ನು ನೀಡುತ್ತಾರೆ. ಗಂಧಾಭಿಷೇಕ ಮಾಡಿಸುವುದರಿಂದ ಶಿಲಾವಿಗ್ರಹಕ್ಕೆ ಯಾವುದೇ ಬಗೆಯ ಕ್ರಿಮಿಕೀಟಗಳ ಬಾಧೆ ತಟ್ಟುವುದಿಲ್ಲವೆಂದು ಪರಂಪರೆಯಿಂದ ಬಂದ ನಂಬಿಕೆಯಾಗಿದೆ. [೧೨]
(ಶ್ರವಣಬೆಳಗೊಳ ಮತ್ತು ಗೊಮ್ಮಟೇಶ್ವರ - ಬಿ. ನಾಗೇಂದ್ರ ಕುಮಾರ್)

## ಮಹಾಮಸ್ತಕಾಭಿಷೇಕದ ವ್ಯವಸ್ಥೆ

ಬಾಹುಬಲಿಗೆ ನಡೆಯುವ ಮಹಾಮಸ್ತಕಾಭಿಷೇಕವು ಒಂದು ದೊಡ್ಡ ಅಹಿಂಸಾಯಾಗದಂತೆ ನಡೆಯುತ್ತದೆ. ಈ ಸಮಯದಲ್ಲಿ ಧರ್ಮ ಜಾಗೃತಿಯು ಎಲ್ಲೆಲ್ಲಿಯೂ ಕಂಡುಬರುತ್ತದೆ. ಧ್ವಜಾರೋಹಣ ಮೊದಲಾದ ಧಾರ್ಮಿಕ ವಿಧಿಗಳನ್ನು ಪ್ರತಿಷ್ಠಾ ಶಾಸ್ತ್ರದ ಅನುಗುಣವಾಗಿ ನೆರವೇರಿಸುತ್ತಾರೆ. ಇಂದ್ರಗಿರಿಯ ಮೇಲೆ ಬಾಹುಬಲಿಯ ಮೂರ್ತಿಯ ಎದುರಿನ ಅಂಗಣವನ್ನು ಸ್ವಚ್ಛಗೊಳಿಸುತ್ತಾರೆ. ಆ ಬೃಹತ್ ಮೂರ್ತಿಯ ಎತ್ತರದಷ್ಟು ಬಲವಾದ ಅಟ್ಟಳಿಗೆಯನ್ನು ಕಟ್ಟುತ್ತಾರೆ. ಮುಂದಿನ ಅಂಗಣ ಪ್ರದೇಶದಲ್ಲಿ ವಿದ್ಯುಕ್ತವಾಗಿ ಪಂಚವರ್ಣಗಳಿಂದ ಶಾಸ್ತ್ರ ರೇಖೆಗಳನ್ನು ಬರೆದು ಸಹಸ್ರದೆಂಟು ಕಲಶಗಳನ್ನು ಸ್ಥಾಪಿಸುತ್ತಾರೆ. ಎಲ್ಲದರಲ್ಲೂ ಸ್ವಚ್ಛವಾದ ನೀರನ್ನು ತುಂಬಿಟ್ಟಿರುತ್ತಾರೆ. ಎಲ್ಲದರ ಮೇಲೂ, ವೀಳ್ಯೆದೆಲೆ, ದರ್ಬೆ, ತೆಂಗಿನಕಾಯಿ ಮೊದಲಾದ ಪೂಜಾ ವಸ್ತುಗಳನ್ನು ಇಡುತ್ತಾರೆ. ಆ ಕಲಶಗಳನ್ನು ಕಲಾತ್ಮಕವಾಗಿ ಜೋಡಿಸಿಟ್ಟಿರುತ್ತಾರೆ. ರಚನಾ ಕೌಶಲ್ಯವು ಆಕರ್ಷಕವಾಗಿರುತ್ತದೆ. ಕಲಶಗಳನ್ನು ಜೈನ ಸಂಸ್ಕೃತಿಯಲ್ಲಿ ಅರ್ಹತ್ಪರಮೇಷ್ಠಿಗಳ ಸ್ವರೂಪವೆಂದೂ, ಅವುಗಳಲ್ಲಿ ತುಂಬಿರುವ ಸ್ವಚ್ಛವಾದ ಜಲವನ್ನು ಕೇವಲ ಜ್ಞಾನ ಸ್ವರೂಪವೆಂದೂ, ಭಾವಿಸಿ ಗೌರವಿಸುತ್ತಾರೆ.

ಕೆಲವು ವರ್ಷಗಳಿಂದೀಚೆಗೆ ಧನಾರ್ಜನೆಯ ದೃಷ್ಟಿಯಿಂದ ಈ ಕಲಶಗಳನ್ನು ಹರಾಜು ಮಾಡುವ ಇಲ್ಲವೇ ಮಾರಾಟ ಮಾಡುವ ವ್ಯವಸ್ಥೆ ಮಾಡುತ್ತಿದ್ದಾರೆ. ಹೆಚ್ಚು ಹಣ ಕೊಟ್ಟವರು ಅಭಿಷೇಕ ಮಾಡಲು ಅರ್ಹರೆಂದೂ, ಅವರು ಹೆಚ್ಚು ಹಣ ಕೊಟ್ಟಷ್ಟು ಹೆಚ್ಚು ಉನ್ನತವಾದ ಸ್ವರ್ಗಲೋಕಗಳನ್ನು ಪಡೆಯುವರೆಂದೂ ಹರಾಜು ಮಾಡುವ ಅಥವಾ ಮಾರಾಟ ಮಾಡುವ ವ್ಯಕ್ತಿಗಳು ಪ್ರಚಾರ ಮಾಡುತ್ತಾರೆ. ಆದರೆ ಇದು ಜೈನ ಶಾಸ್ತ್ರದ ದೃಷ್ಟಿಯಿಂದ ಧರ್ಮವೆನಿಸುವುದಿಲ್ಲ. ಅಲ್ಲದೆ, ಧರ್ಮಸ್ವರೂಪನಾದ ಅರ್ಹತ್ಪರಮೇಷ್ಠಿಗಳಿಗೆ ಲೌಕಿಕ ಹಣದ ಬೆಲೆಕಟ್ಟಿ ಹರಾಜು ಮಾಡಿದ ಅಪಚಾರವಾಗುವುದೆಂದು ಧಾರ್ಮಿಕ ವ್ಯಕ್ತಿಗಳ ಅಭಿಪ್ರಾಯವಾಗಿದೆ. ಜೈನ ಧರ್ಮದ ದೃಷ್ಟಿಯಿಂದ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಾತ್ಮಕವಾದ ಮೋಕ್ಷ ಮಾರ್ಗವು ಮಾತ್ರವೇ ನಿಜವಾದ ಧರ್ಮವಾಗಿರುವುದರಿಂದ ಕಲಶಗಳ ಹರಾಜಾಗಲೀ, ಮಾರಾಟವಾಗಲೀ, ಸತ್ಯಧರ್ಮವೆನಿಸುವುದಿಲ್ಲ ಎಂಬ ಮಾತು ಸರಿಯಾಗಿರುತ್ತದೆ. ಆದರೆ ಇಂದಿನ ಯುಗದಲ್ಲಿ ಧರ್ಮದ ಕ್ಷೇತ್ರಗಳಲ್ಲಿ ಆಡಂಬರವೇ ಹೆಚ್ಚಾಗಿರುವುದರಿಂದಲೂ, ಹಣವೇ ಪ್ರಧಾನವೆಂದು ಬಗೆದಿರುವುದರಿಂದಲೂ ಧರ್ಮವು ಗೌಣವಾಗಿ ಹೋಗಿದೆ.

## ಮಹಾಮಸ್ತಕಾಭಿಷೇಕದ ದೃಶ್ಯ ಮತ್ತು ವರ್ಣನೆ

ಕರಾವಳಿಯ ಜಿಲ್ಲೆಗಳಲ್ಲಿ ಈ ಹಿಂದೆ ನಡೆದ ಬಾಹುಬಲಿ ಮಹಾಮಸ್ತಕಾಭಿಷೇಕದ ದೃಶ್ಯ ಹಾಗೂ ವರ್ಣನೆ ಈ ರೀತಿ ಕಾಣುತ್ತಿತ್ತು. ಕ್ಷೀರದಲ್ಲಿ ಮಿಂದಾಗ ಧವಳ ಮೂರ್ತಿಯಾಗಿ, ಇಕ್ಷುರಸ ಸುರಿದಾಗ ತುಷಾರ ಮೂರ್ತಿಯಾಗಿ, ಅರಸಿನ ಲೇಪನವಾದಾಗ ಚಿನ್ನದ ಮೂರ್ತಿಯಾಗಿ, ಕಷಾಯಾಭಿಷೇಕಕ್ಕೆ ಹವಳದ ಮೂರ್ತಿಯಾಗಿ, ಶ್ರೀಗಂಧ ಚಂದನ ಲೇಪಕ್ಕೆ ಮಾಣಿಕ್ಯ ಮೂರ್ತಿಯಾಗಿ ಒಂದೊಂದು ಕ್ಷಣ ಒಂದೊಂದು ಅಪೂರ್ವ ರೂಪದಲ್ಲಿ ಬಾಹುಬಲಿ ಮೂರ್ತಿ ಕಂಗೊಳಿಸುತ್ತದೆ.

ಕೊನೆಗೆ ಬಾಹುಬಲಿ ಮೂರ್ತಿಯಷ್ಟೇ ಗಾತ್ರದ ಬೃಹತ್ ಪುಷ್ಪಮಾಲೆಯನ್ನು ಹಾಕಲಾಗುತ್ತದೆ. ಮಹಾಮಂಗಳಾರತಿ ಎತ್ತಲಾಗುತ್ತದೆ. ನಂತರ ಜಯಕಾರವು ಬಾಹುಬಲಿಯು ಜಗತ್ತಿಗೆ ಸಾರಿದ ತ್ಯಾಗ, ಅಹಿಂಸೆ, ಪ್ರೇಮಗಳ ಸಂದೇಶವನ್ನು ಪ್ರತಿಧ್ವನಿಸುವಂತಿರುತ್ತದೆ.

## ವರ್ಣನೆ ಮತ್ತು ವಿವರಣೆ

ಸಾಮಾನ್ಯವಾಗಿ ಮಹಾಮಸ್ತಕಾಭಿಷೇಕಗಳು ಅಗ್ರೋದಕ ಮೆರವಣಿಗೆಯೊಂದಿಗೆ ಆರಂಭವಾಗುತ್ತದೆ. ಈ ಮೆರವಣಿಗೆಯಲ್ಲಿ ಪವಿತ್ರವಾದ ನದಿಗಳ ಜಲವನ್ನು ಹೊಂದಿದ ಕಲಶಗಳನ್ನು ತರಲಾಗುತ್ತದೆ. ಕಲಶಾಭಿಷೇಕ ಪೂರ್ಣವಾದ ಬಳಿಕ ಪಂಚಾಮೃತ ಅಭಿಷೇಕಗಳು ನಡೆದ ಬಳಿಕ ಮಹಾಮಜ್ಜನದ ಅಭಿಷೇಕಗಳು ಪ್ರಾರಂಭವಾಗುತ್ತದೆ.

## ಜಲಾಭಿಷೇಕ

ದೇವೇಂದ್ರನು ಜಿನ ಭಗವಂತನಿಗೆ ಮೇರು ಪರ್ವತದ ಪಾಂಡುಕ ಶಿಲೆಯ ಮೇಲೆ ಸಮುದ್ರದ ನೀರಿನಿಂದ ಮಾಡಿದ ಅಭಿಷೇಕದ ಸಂಕೇತವಾಗಿ ಜಲಾಭಿಷೇಕ ಎಂದು ಪುರಾಣ ಕಥಾನಕ ಹೇಳುತ್ತದೆ. ಜಿನ ಭಗವಂತ ಅದ್ಭುತ ಜ್ಞಾನದಿಂದ ಮೂರು ಲೋಕದ ಮೇಲೆ ಜ್ಞಾನದ ಮಳೆಯನ್ನು ಸುರಿಸಿದ ಸಂಕೇತವಾಗಿ ಈ ಸ್ನಾನ ಜಲದ ಪ್ರವಾಹದವು ಜನತೆಗೆ ಶಾಂತಿ, ಐಶ್ವರ್ಯ, ಸಂತೋಷ, ದೀರ್ಘಾಯುಷ್ಯ ನೀಡುವುದೆಂದು ನಂಬಿಕೆ.

## ನಾಳಿಕೇರಾಭಿಷೇಕ

ಬಾಹುಬಲಿಯು ಶಾರೀರಿಕ ಹಾಗೂ ಮಾನಸಿಕವಾದ ಸರ್ವದೋಷಗಳಿಂದ ಅತೀತರೆಂದು ನಂಬಿಕೆ. ಆದ್ದರಿಂದ ಭಕ್ತರು ಕೂಡಾ ತಮ್ಮ ಈ ದೋಷಗಳನ್ನು ನಿವಾರಿಸಿಕೊಳ್ಳಲು ಹಾಗೂ ಶಾರೀರಿಕವಾದ ದೋಷಗಳನ್ನು ಪರಿಹರಿಸಿಕೊಳ್ಳಲು ತಂಪಾದ - ಪರಿಶುದ್ಧವಾದ ನಾಳಿಕೇರಾಭಿಷೇಕ ನಡೆಸುತ್ತಾರೆ.

## ಇಕ್ಷುರಸಾಭಿಷೇಕ (ಚಿತ್ರ - ೧)

ಕಬ್ಬಿನ ರಸದ ಅಭಿಷೇಕವಾಗುತ್ತಿದ್ದಂತೆಯೇ ಬಾಹುಬಲಿಯು ತುಷಾರ ಸಿಂಚನಗೊಂಡ ಹಾಗೆ ಕಾಣುತ್ತದೆ. ಜೈನ ಪುರಾಣದ ಪ್ರಕಾರ ಬಾಹುಬಲಿಯು ಕಾಮದೇವ; ಕಬ್ಬಿನ ಜಲ್ಲೆಯ ಮೂಲಕ ಮನಸ್ಸು ಪರಿವರ್ತನೆಯಾಗುತ್ತದೆ. ಅಂತಹ ಕಾಮನನ್ನು ನಿಗ್ರಹಿಸಿ, ಆ ಕಬ್ಬಿನ ಜಲ್ಲೆಯನ್ನು ಹಿಂಡಿ ಅದರ ರಸದಿಂದ ತ್ರೈಲೋಕ್ಯಾಧಿಪತಿ ಜಿನ ಭಗವಂತ ತನಗೆ ತಾನೇ ಅಭಿಷೇಕ ಮಾಡಿಸಿಕೊಂಡು ಎಲ್ಲ ಕರ್ಮಗಳನ್ನು ನಾಶ ಮಾಡಿಕೊಂಡರೆಂಬ ಕಲ್ಪನೆಯ ಆಧಾರದಲ್ಲಿ ಇಕ್ಷುರಸಾಭಿಷೇಕ. ಮಾನವನಿಗೆ ಅಂಟಿಕೊಂಡ ಕರ್ಮ ನಾಶವಾಗುವುದೆಂಬ ನಂಬಿಕೆ.

**ಕ್ಷೀರಾಭಿಷೇಕ** (ಚಿತ್ರ - ೨)

ಬಾಹುಬಲಿಯ ದೇಹ ತುಂಬಾ ಆವರಿಸಿದ ಕ್ಷೀರಧಾರೆಯಿಂದ ಮೂರ್ತಿ ಧವಳದ ಮೂರ್ತಿಯ ಹಾಗೆ, ಬೆಳ್ಳಿಯ ಮೂರ್ತಿಯ ಹಾಗೆ ಕಾಣಿಸುತ್ತದೆ. ಇದನ್ನು ಕವಿ ಚದುರಚಂದ್ರಮನು ೧೬೪೬ ರಲ್ಲಿ ನಡೆದ ಮಹಾಮಸ್ತಭಿಷೇಕವನ್ನು ಈ ರೀತಿ ವರ್ಣಿಸಿದ್ದಾನೆ.

ಗೋಕ್ಷೀರದಿಂದ ಮಜ್ಜನವ ಮಾಡಿಸಲಾಗ
ಳೀಕ್ಷಿಪ ಜನರಕ್ಷಿಗಳಿಗೆ
ಸಾಕ್ಷಾತ್ ರಜತ ನಿರ್ಮಿತ ಬಿಂಬವೆಂಬಂ
ತಾಕ್ಷಣದೊಳಗೊಪ್ಪಿದುದು

ದೇವೇಂದ್ರನು ಮೇರು ಪರ್ವತದಲ್ಲಿ ಕ್ಷೀರ ಸಾಗರದಿಂದ ಅಭಿಷೇಕ ನಡೆಸಿದ ಸಂಕೇತವಿದೆಂದು ಪುರಾಣ ಪ್ರತೀತಿ. ಹಾಲು ಎಂಬುದು ಬಿಳಿ, ಶುಭ್ರ, ನಿರ್ಮಲ. ಈ ಅಭಿಷೇಕದ ಫಲದಿಂದ ಲೋಕವೆಲ್ಲಾ ಶುಭ್ರವಾಗಿ, ಶಾಂತಿ ನೆಲೆಸಿ, ಸಂತುಷ್ಟಿ, ಪುಷ್ಟಿ, ಆರೋಗ್ಯ ಲಭಿಸುವುದೆಂದು ನಂಬಿಕೆ.

**ಅಕ್ಕಿಹುಡಿ ಅಭಿಷೇಕ** (ಚಿತ್ರ - ೩)

ಕ್ಷೀರಾಭಿಷೇಕದ ಬಳಿಕ ಬಾಹುಬಲಿಗೆ ಅಕ್ಕಿಹಿಟ್ಟಿನ ಅಭಿಷೇಕ. ಮೂರ್ತಿಯ ಮೇಲೆ ಕ್ಷೀರಾಭಿಷೇಕದಿಂದ ಉಂಟಾದ ಜಿಗುಟನ್ನು ನಿವಾರಿಸಲು ಅಕ್ಕಿ ಹಿಟ್ಟಿನ ಅಭಿಷೇಕ ನಡೆಯುತ್ತದೆ.

ಆತ್ಮಕ್ಕೆ ಅಂಟಿಕೊಂಡ ಕೊಳೆ ಎಂಬ ಚಿಗುಟನ್ನು ನಿವಾರಿಸಿಕೊಂಡು ಪರಿಶುದ್ಧನಾಗಬೇಕೆಂಬುದರ ಸಂಕೇತವಿದು.

**ಅರಸಿನಾಭಿಷೇಕ** (ಚಿತ್ರ - ೪)

ಅರಸಿನ ಅನ್ನುವುದು ಬಂಗಾರದ ಬಣ್ಣದಿಂದ ಕೂಡಿದ್ದು ಅನೇಕ ಔಷಧೀಯ ಗುಣಗಳನ್ನು ಹೊಂದಿದೆ. ಬಿಸಿಲು, ಗಾಳಿ, ಮಳೆ ಎನ್ನದೆ ಶತ ಶತಮಾನಗಳ ಕಾಲವಿರುವ ಬಾಹುಬಲಿಯ ಮೂರ್ತಿಯ ರಕ್ಷಣೆಗೆ ವೈವಿಧ್ಯಮಯ ದ್ರವ್ಯಾಭಿಷೇಕ ನಡೆಯುವುದೆಂಬ ಸೂಚನೆ ಇದೆ.

ಭಕ್ತಾದಿಗಳ ನಂಬಿಕೆಯಂತೆ ಅರಸಿನಾಭಿಷೇಕದ ಫಲವಾಗಿ ದೇಹದ ಅನೇಕ ರೋಗಗಳ ನಿವಾಗಣೆಯಾಗುತ್ತದೆ. ಸುಂದರವಾದ ರೂಪ ಉಂಟಾಗುತ್ತದೆ.

**ಕಷಾಯಾಭಿಷೇಕ** (ಚಿತ್ರ - ೫)

ಅಶ್ವತ್ಥ, ಮಾವು, ಪಲಾಶ, ಅತ್ತಿ, ಆಲ, ಗೋಳಿ ಮುಂತಾದ ಮರಗಳ ಕೆತ್ತೆಗಳನ್ನು ತಂದು ಪುಡಿಮಾಡಿ ಕುದಿಸಿ ಹದ ಬಿಸಿಯಾದ ಕಷಾಯಭಿಷೇಕದಲ್ಲಿ ಹದಿನೆಂಟು ವಿಧದ ಔಷಧೀಯ ಗುಣವುಳ್ಳ ಕೆತ್ತೆಗಳ ಚೂರ್ಣವಿರುತ್ತದೆ.

ಈ ಕಷಾಯವನ್ನು ಕಷಾಯ ರಹಿತನಾದ ಭಗವಂತನಿಗೆ ಅಭಿಷೇಕ ಮಾಡುವುದರ ಫಲವಾಗಿ ಮಾನವನು ಕ್ರೋಧ, ಮಾಯೆ, ಲೋಭಗಳೆಂಬ ಕಷಾಯದಿಂದ ಮುಕ್ತನಾಗುತ್ತಾನೆ ಎಂಬ ನಂಬಿಕೆ. ಈ ಚೂರ್ಣಗಳು ಹಾಗೂ ಕಷಾಯಗಳ ಲೇಪನವನ್ನು ತೊಳೆಯುವುದಕ್ಕಾಗಿ ಮೂರ್ತಿಗೆ ನಾಲ್ಕು ಮಹಾಕಲಶ ಕುಂಭಾಭಿಷೇಕ ನಡೆಸಲಾಗುತ್ತದೆ.

**ಗಂಧಚಂದನಾಭಿಷೇಕ** (ಚಿತ್ರ - ೬)

ಗಂಧ ಚಂದನಾಭಿಷೇಕವಾಗುತ್ತಿದ್ದಂತೆಯೇ ಬಾಹುಬಲಿ ಮೂರ್ತಿ ಮಾಣಿಕ್ಯದ ಮೂರ್ತಿಯ ಹಾಗೆ ಗಂಧ ಸಿಂಚನವಾಗುತ್ತಿದ್ದಾಗ ಪರಿಸರವೆಲ್ಲ ಪರಿಮಳಿಸುತ್ತದೆ.

ಕೆಂಪು ಚಂದನದ ಅಭಿಷೇಕವಾಗುತ್ತಿದ್ದಂತೆ ವರ್ಣನಾತೀತ ಸೌಂದರ್ಯ. ಗಂಧ ಚಂದನ ಬೆರೆತು ಬಾಹುಬಲಿಯ ತಲೆಯ ಗುಂಗುರು ಕೂದಲಿನಿಂದ ಮುಖಕ್ಕಿಳಿದು, ಹರವಾದ ಎದೆಯನ್ನು ಬಳಸಿ, ನಾಭಿಯಿಂದ ಮುಂದುವರಿದು, ತೊಡೆಯಲ್ಲಿ ಹರಿದು ಪಾದಗಳನ್ನು ತೋಯಿಸಿದಾಗ ಮಾಣಿಕ್ಯ ಮೂರ್ತಿಯ ಹಾಗೆ ಕಂಗೊಳಿಸುತ್ತದೆ.

ಗಂಧ ಚಂದನದ ಜತೆ ಏಲಕ್ಕಿ, ಲವಂಗ, ಪಚ್ಚೆಕರ್ಪೂರ, ಕುಂಕುಮ, ಕೇಸರಿ, ಅರಸಿನ, ಜಾಯಿಕಾಯಿ ಮುಂತಾದ ಸುಗಂಧ ದ್ರವ್ಯ ಬೆರೆತಿರುತ್ತದೆ. ಜನರ ಸಾಂಸಾರಿಕ ದುಃಖಗಳನ್ನು ಗಂಧೋದಕ ನಾಶಪಡಿಸುತ್ತದೆ. ಉತ್ತಮ ಫಲಗಳು ಲಭಿಸುತ್ತವೆ ಎಂಬ ನಂಬಿಕೆ. ಈ ಅಭಿಷೇಕದ ಹಿಂದೆ ಇದೆ.

**ಕನಕಾಭಿಷೇಕ** (ಚಿತ್ರ - ೭)

ಬೆಳ್ಳಿ, ಬಂಗಾರದ ಸಣ್ಣ ಸಣ್ಣ ಕಣಗಳನ್ನು ಮಾಡಿ, ಅದರಿಂದ ಮೂರ್ತಿಗೆ ಅಭಿಷೇಕವನ್ನು ಮಾಡಲಾಗುತ್ತದೆ. ಇದರಿಂದ ಸಮಸ್ತ ಜನರಿಗೆ ಧನ, ಕನಕ ಸಮೃದ್ಧಿಯಾಗಲಿ ಎಂದು ನಂಬಿಕೆ.

**ಪುಷ್ಪ ವೃಷ್ಟಿ** (ಚಿತ್ರ - ೮)

ಅನೇಕ ವಿಧದ ಹೂಗಳಿಂದ ಅಂದರೆ, ಸಾಮಾನ್ಯವಾಗಿ ೫೦ ರಿಂದ ೬೦ ವಿಧದ ಹೂಗಳಿಂದ ಬಾಹುಬಲಿಗೆ ಪುಷ್ಪವೃಷ್ಟಿಯನ್ನು ಮಾಡಲಾಗುತ್ತದೆ. ಪುಷ್ಪದಳಗಳು ಬಾಹುಬಲಿಯನ್ನು ಮುತ್ತಿಕ್ಕುತ್ತಿದ್ದಂತೆಯೇ ಬಾಹುಬಲಿಯಷ್ಟೇ ಎತ್ತರದ ಹೂಮಾಲೆಯನ್ನು ಮೂರ್ತಿಗೆ ಹಾಕಲಾಗುತ್ತದೆ.

**ಮಂಗಳಾರತಿ**

ಮಹಾಮಸ್ತಕಾಭಿಷೇಕದ ಕೊನೆಯ ಹಂತವೆಂದರೆ, ಮಂಗಳಾರತಿಯನ್ನು ಬೆಳಗಿಸುವುದು. ಭಗವಂತ, ನಾನು ನಿನಗೋಸ್ಕರ ಈ ಪೂಜೆ ಮತ್ತು ಪ್ರತಿಷ್ಠೆಯನ್ನು ಮಾಡಲಿಲ್ಲ. ಎಲ್ಲ ಪ್ರಾಣಿಗಳಿಗೂ, ಸಮಸ್ತ ಪ್ರಜೆಗಳಿಗೂ, ಜೀವಕೋಟಿಗಳಿಗೂ ಇದರಿಂದ ಕ್ಷೇಮವಾಗಲಿ, ಮಂಗಳವಾಗಲಿ, ಯೋಗ್ಯ ಸಮಯದಲ್ಲಿ ಮಳೆಯಾಗಿ ಬೆಳೆ ವೃದ್ಧಿಸಲಿ.

## ಬಾಹುಬಲಿಗೆ ನಡೆಸುವ ಕಲ್ಯಾಣಗಳು

ಜೈನ ತೀರ್ಥಂಕರರಿಗೆ ಪಂಚಕಲ್ಯಾಣ ವಿಧಿಯನ್ನು ಆಚರಿಸುತ್ತಾರೆ. ಪಂಚಕಲ್ಯಾಣ್ಯ ಎಂದರೆ, ೧. ಗರ್ಭಾವತರಣ ಕಲ್ಯಾಣ ೨. ಜನ್ಮಾಭಿಷೇಕ ಕಲ್ಯಾಣ ೩. ದೀಕ್ಷಾ ಕಲ್ಯಾಣ ೪. ಕೇವಲ ಜ್ಞಾನ ಕಲ್ಯಾಣ ೫. ನಿರ್ವಾಣ ಕಲ್ಯಾಣ ಎಂಬ ೫ ವಿಧದ ಕಲ್ಯಾಣಗಳಿಗೆ ಪಂಚಕಲ್ಯಾಣ ಎಂದು ಕರೆಯುತ್ತಾರೆ. ಆದರೆ ಬಾಹುಬಲಿಗೆ ಪಂಚಕಲ್ಯಾಣ ವಿಧಿಯನ್ನು ಆಚರಿಸುವುದಿಲ್ಲ. ಏಕೆಂದರೆ, ಬಾಹುಬಲಿಯು ತೀರ್ಥಂಕರನಲ್ಲ. ಆದರೂ, ಅವನು ಆದಿ ತೀರ್ಥಂಕರನ ಮಗನಾಗಿ ಕೇವಲಜ್ಞಾನ ಪಡೆದು, ಮೊಟ್ಟಮೊದಲು ಮೋಕ್ಷಕ್ಕೆ ಹೋಗಿದ್ದಾನೆ. ಲೋಕಕ್ಕೆ ಮುಕ್ತಿಯ ಮಾರ್ಗವನ್ನು ತೋರಿಸಿದ ಮಹಾ ಪುರುಷ ಇವನು. ತೀರ್ಥಂಕರರಂತೆ ಬಾಹುಬಲಿಯು ತೀರ್ಥಂಕರ ನಾಮ ಪ್ರಕೃತಿಯ ಬಂಧವನ್ನು ಮಾಡಿಕೊಂಡು ಬರದೇ ಇರುವುದರಿಂದ ಹಾಗೂ ಗರ್ಭಾವತರಣ ಕಲ್ಯಾಣ, ಜನ್ಮಕಲ್ಯಾಣಗಳು ದೇವೇಂದ್ರನಿಂದ ಇವನಿಗೆ ಜರುಗಿಸಲ್ಪಡಲಿಲ್ಲ. ಆದರೆ ತಪಸ್ಸಿಗೆ ಹೋಗುವಾಗ, ದೀಕ್ಷೆಯನ್ನು ಪಡೆಯುವಾಗ, ಸಮವಸರಣದಲ್ಲಿ ದೇವೇಂದ್ರನು ಉಪಸ್ಥಿತನಾಗಿದ್ದ. ಆದುದರಿಂದ ಬಾಹುಬಲಿಗೆ ದೀಕ್ಷಾ ಕಲ್ಯಾಣ, ಕೇವಲಜ್ಞಾನ ಕಲ್ಯಾಣ, ನಿರ್ವಾಣ ಕಲ್ಯಾಣಗಳನ್ನು ನಡೆಸಲಾಗುತ್ತದೆ. ಬಾಹುಬಲಿಯ ಪ್ರತಿಷ್ಠೆ ಮತ್ತು ಮಸ್ತಕಾಭಿಷೇಕದ ಸಮಯದಲ್ಲಿ, ಇತರ ತೀರ್ಥಂಕರರ ಪ್ರತಿಮೆಗೆ ಪಂಚಕಲ್ಯಾಣ ವಿಧಿಗಳನ್ನು ನಡೆಸಬೇಕಾಗುತ್ತದೆ.[೧೪]

## ದೀಕ್ಷಾ ಕಲ್ಯಾಣ

ಜಿನ ಕುಮಾರನು ಬಾಲ್ಯ ಕಾಲವನ್ನು ಕಳೆದು, ಯೌವನಾವಸ್ಥೆಗೆ ಬಂದನಂತರ ಅವನ ತಂದೆಯು, ಅವನಿಗೆ ರಾಜ್ಯಭಾರವನ್ನು ವಹಿಸಿಕೊಡುತ್ತಾನೆ. ಆ ಸಂದರ್ಭದಲ್ಲಿ ದೇವೇಂದ್ರನು ಆಗಮಿಸಿ, ರಾಜ್ಯಾಭಿಷೇಕ ಕಾರ್ಯವನ್ನು ವೈಭವದಿಂದ ನೆರವೇರಿಸುತ್ತಾನೆ. ಪ್ರತಿಷ್ಠಾ ಸಂದರ್ಭದಲ್ಲಿ, ಪ್ರತಿಮೆಗಳಲ್ಲಿ ವಿಧಿ ವಿಧಾನದ ಮೂಲಕ ಆ ರೀತಿಯಾಗಿ ಸಂಕಲ್ಪವನ್ನು ಪ್ರಯೋಗಮಾಡತಕ್ಕದ್ದು. ಜಿನಕುಮಾರನು ಚಕ್ರವರ್ತಿಯಾಗಿ ಸಕಲ ಭೋಗ - ಭಾಗ್ಯಗಳನ್ನು ಅನುಭವಿಸುತ್ತಿರುತ್ತಾನೆ. ಕೆಲವೊಮ್ಮೆ ಭೋಗದ ಅತಿಶಯತೆಯಲ್ಲಿ ತನ್ನನ್ನು ತಾನು ಮರೆತುಬಿಡುತ್ತಾನೆ. ಆಗ ದೇವೇಂದ್ರನು ಯಾವುದಾದರೂ ಘಟನೆಯ ಮೂಲಕ, ಈ ಭೋಗ ಭಾಗ್ಯಗಳ ನಶ್ವರತೆಯನ್ನು ಮನದಟ್ಟು ಮಾಡಿಕೊಡುವ ಅಗತ್ಯ ಒದಗುತ್ತದೆ. ತನ್ಮೂಲಕ ವೈರಾಗ್ಯಪರವಾಗಿ ಜಿನಕುಮಾರನು ಎಲ್ಲಾ ಭೋಗ- ಭಾಗ್ಯಗಳಿಗೆ ತಿಲಾಂಜಲಿಯನ್ನು ಕೊಟ್ಟು, ವಿಧ್ಯುಕ್ತವಾಗಿ ದೀಕ್ಷೆಯನ್ನು ಸ್ವೀಕರಿಸಿ ತಪಶ್ಚರ್ಯಕ್ಕೆ ತೆರಳುತ್ತಾನೆ. ಹಾಗೆಯೇ ಸಮೀಪದ ಕಾಡಿನಲ್ಲಿ ಆಯಾ ತೀರ್ಥಂಕರರ ದೀಕ್ಷಾ ವೃಕ್ಷಗಳನ್ನು ಸ್ಥಾಪಿಸಬೇಕಾಗುತ್ತದೆ. ಅಷ್ಟರಲ್ಲಿ ದೇವೆಂದ್ರನು ಸ್ವರ್ಗಲೋಕದಿಂದ ಬರುತ್ತಾನೆ. ತೀರ್ಥಂಕರನ ದೀಕ್ಷಾಕಲ್ಯಾಣದ ವಿಧಿಯಲ್ಲಿ ಭಾಗವಹಿಸುತ್ತಾನೆ. ಸ್ವರ್ಗದಿಂದ ತಾನು ತಂದ ವಿಶೇಷ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ದೀಕ್ಷಾವನದವರೆಗಾದರೂ ಹೋಗಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತಾನೆ. ಕೊನೆಗೆ ಇಂದ್ರಾದಿ ಎಲ್ಲಾ ದೇವತೆಗಳೂ ಪಲ್ಲಕ್ಕಿಯನ್ನು ಹೊತ್ತುಕೊಂಡು ಆಕಾಶ ಮಾರ್ಗದಲ್ಲಿ ಕ್ರಮಿಸುತ್ತಾರೆ. ಈ ದೀಕ್ಷಾ ಕಲ್ಯಾಣದ ಸಮಯ ನಾಂದಿ ಮಂಗಲ, ಯಾಗ

ಮಂಡಲಾರಾಧನೆ, ಮೊದಲಾದ ವಿಧಿಗಳನ್ನು ಆಚರಿಸಲಾಗುತ್ತದೆ. ದೀಕ್ಷಾ ಮಂಟಪದಲ್ಲಿ ಪ್ರಭುವು ಮುಟ್ಟಿದ ಕೂಡಲೇ, ಅವರನ್ನು ಪೂರ್ವಾಭಿಮುಖವಾಗಲಿ, ಉತ್ತರಾಭಿಮುಖವಾಗಲಿ ಕುಳ್ಳಿರಿಸಿ, ಅನಂತರ ವಸ್ತ್ರ ಭೂಷಣಗಳನ್ನು ತ್ಯಾಗ ಮಾಡಿಸಿ, ಕೇಶಲೋಚನೆ ಮಾಡಿ ಕಂಕಣ ವಿಮೋಚನೆಯನ್ನು ಮಾಡಿಸಲಾಗುತ್ತದೆ. ನಂತರ ಅಷ್ಟವಿಧಾರ್ಚನೆಗಳಿಂದ ಪೂಜಿಸಲಾಗುತ್ತದೆ. ದೇವೇಂದ್ರನು ಕೇಶಲೋಚ ಮಾಡಿದ ಕೇಶಗಳನ್ನು ರತ್ನ ಕರಂಡಕದಲ್ಲಿ ಇಟ್ಟು, ಬಹಳ ವೈಭವದಿಂದ ಸಮುದ್ರದಲ್ಲಿ ಬಿಡುತ್ತಾನೆ.

ಹೀಗೆ ದೀಕ್ಷಿತರಾದವರಿಗೆ ಸಾಮಾಜಿಕ, ಚಾರಿತ್ರಿಕವೂ ಆಗುತ್ತದೆ. ಹಾಗೆಯೇ ಮತಿ, ಶ್ರುತ, ಅವಧಿ ಜ್ಞಾನಗಳೊಡನೆ ಮನಃ ಪರ್ಯಾಯ ಜ್ಞಾನವೂ ಆಗುತ್ತದೆ. ಅನಂತರ ಪ್ರಭುಗಳನ್ನು ತಪಶ್ಚರ್ಯಕ್ಕೆ ಅಲ್ಲಿಯೇ ಬಿಟ್ಟು, ಪಂಚಾಂಗ ಪ್ರಣಾಮಗಳನ್ನು ಮಾಡಿ ಅಲ್ಲಿಂದ ತೆರಳಲಾಗುತ್ತದೆ. ಈ ಸಂದರ್ಭದಲ್ಲಿ ದೀಕ್ಷಾ ಕಲ್ಯಾಣಕ್ಕೆ ಉಪಯುಕ್ತವಾದ ಮಂತ್ರ, ತಂತ್ರಾದಿಗಳ ಪ್ರಯೋಗವನ್ನು ಮಾಡಲಾಗುತ್ತದೆ. ಅಲ್ಲದೆ ವಿದ್ವಾಂಸರಿಂದ ವೈರಾಗ್ಯ ಪೂರ್ಣವಾದ ಪ್ರವಚನವನ್ನು ಮಾಡಿಸಲಾಗುತ್ತದೆ. ಹೀಗೆ ಪ್ರತಿಷ್ಠಾ ಶಾಸ್ತ್ರಕ್ಕೆ ಅನುಗುಣವಾಗಿ ಎಲ್ಲಾ ವಿಧಿಗಳನ್ನೂ ಆಚರಿಸಲಾಗುತ್ತದೆ. ಹೀಗೆ ವಿಧಿಪೂರ್ವಕವಾಗಿ ಸಂಸಾರ ತ್ಯಾಗ ಮಾಡಿ, ಮುನಿ ದೀಕ್ಷೆಯನ್ನು ಸ್ವೀಕರಿಸಿ ತಪೋ ಮಾರ್ಗವನ್ನನುಸರಿಸುವುದಕ್ಕೆ ದೀಕ್ಷಾ ಕಲ್ಯಾಣವೆಂದು ಹೆಸರು.

## ಕೇವಲ ಜ್ಞಾನ ಕಲ್ಯಾಣ

ಘಾತಿ ಕರ್ಮಗಳು ನಾಶವಾದ ನಂತರ, ದಿವ್ಯ ಜ್ಞಾನವು ಪ್ರಾಪ್ತವಾಗುತ್ತದೆ. ಇದಕ್ಕೆ ಕೇವಲ ಜ್ಞಾನವೆಂದೂ ಕರೆಯುತ್ತಾರೆ. ಇದು ಅಖಂಡ, ಏಕಜ್ಞಾನವಾಗಿರುತ್ತದೆ. ಮುನಿಗಳು ಯಾವುದನ್ನು ಪಡೆಯಲು ವ್ರತಾದಿ - ಅನುಷ್ಠಾನಗಳನ್ನು ನಡೆಸುತ್ತಾರೋ, ಅದಕ್ಕೆ ಕೇವಲವೆಂದು ಕರೆಯಲಾಗುತ್ತದೆ. ಈ ಕೇವಲ ಜ್ಞಾನ ಕಲ್ಯಾಣದಲ್ಲಿಯೂ ದೇವೇಂದ್ರನು ಬರುತ್ತಾನೆ. ಪ್ರತಿಷ್ಠಾ ಸಮಯದಲ್ಲಿ ಇದಕ್ಕೆ ಸಂಬಂಧಿಸಿದ ವಿಧಿಗಳನ್ನೆಲ್ಲಾ ಪ್ರತಿಷ್ಠಾ ಶಾಸ್ತ್ರದ ಪ್ರಕಾರ ಸಿಂಹಾಸನದ ಮೇಲೆ, ಪ್ರತಿಮಾ ಸ್ಥಾಪನೆಯನ್ನು ಮಾಡಲಾಗುತ್ತದೆ. ಹಾಗೆಯೇ ಅಲ್ಲಿ ಮಂತ್ರನ್ಯಾಸ,, ಅಂತನ್ಯಾಸ, ನಯನೋನ್ಮೀಲನ ಮೊದಲಾದ ವಿಧಿಗಳಿಗೆ ಅನುಕೂಲವಾದ ಗಂಧದ ಬಟ್ಟಲು ಮತ್ತು ಬಂಗಾರದ ಕಡ್ಡಿಯನ್ನು ಸ್ಥಾಪಿಸಲಾಗುತ್ತದೆ. ಇದರ ನಂತರ ಪಂಚಕಲ್ಯಾಣ ಮಾಲಾರೋಪಮ ಮೊದಲಾದವುಗಳನ್ನು ಮಾಡಿ ೧೦ ಅತಿಶಯಗಳ ಸ್ಥಾಪನೆ, ೧೪ ಅತಿಶಯಗಳ ಸಂಕಲ್ಪ, ೮ ಪ್ರಾತಿಹಾರ್ಯಗಳ ರಚನೆ, ಲಾಂಛನ ಸ್ಥಾಪನೆ, ಯಕ್ಷ - ಯಕ್ಷಿಗಳ ಸ್ಥಾಪನೆಯನ್ನು ಮಾಡಿ, ಸಮವಸರಣದ ವಿಧಿಯನ್ನು ಮಾಡಲಾಗುತ್ತದೆ. ಸಮ್ಯಗ್ದರ್ಶನ. ಜ್ಞಾನಚಾರಿತ್ರ್ಯಗಳ ಪೂರ್ತಿಯೂ, ಬಾಹ್ಯಾಭ್ಯಂತರ ತಪಸ್ಸುಗಳ ಪೂರ್ತಿಯೂ ಇದರಲ್ಲಿಯೇ ಆಗುತ್ತದೆ. ಹೀಗಾಗಿ ಎಲ್ಲಾ ವಿಧಿಗಳನ್ನು ಇದರಲ್ಲಿಯೇ ಮುಗಿಸಲಾಗುತ್ತದೆ.

## ನಿರ್ವಾಣ ಕಲ್ಯಾಣ

ಕೇವಲ ಜ್ಞಾನವಾದರೂ, ಸಯೋಗ ಕೇವಲಿ ಅವಸ್ಥೆ ಇರುತ್ತದೆ. ಇದರಿಂದ ಮುಕ್ತಿ ಸಾಧ್ಯವಾಗುವುದಿಲ್ಲ.

ಅಯೋಗಿ ಕೇವಲಿಯೆಂಬ ೧೪ನೇ ಗುಣಸ್ಥಾನವನ್ನು ಧಾರಣೆ ಮಾಡಿ, ಯೋಗಗಳ ಅಭಾವವನ್ನು ಮಾಡುವುದರಿಂದ ಸಿದ್ಧ ಅವಸ್ಥೆಯನ್ನು ಹೊಂದಿ ಆ ಜೀವನು, ಮುಕ್ತಿ ಹೊಂದುತ್ತಾನೆ. ಈ ವಿಷಯವನ್ನು ಅರಿತ ಸ್ವರ್ಗಾಧಿಪತಿಯು ತನ್ನ ಪರಿವಾರ ಸಮೇತನಾಗಿ, ನಿರ್ವಾಣ ಕಲ್ಯಾಣ ಮಹೋತ್ಸವವನ್ನು ಆಚರಿಸಲು ಬರುತ್ತಾನೆ. ಮೊಟ್ಟಮೊದಲು ಯಾಗ ಮಂಟಪದಲ್ಲಿ ಪ್ರಭುವನ್ನು ವಿರಾಜಮಾನ ಮಾಡಿ, ಅಷ್ಟ ಗುಣಗಳ ಪ್ರತ್ಯೇಕ ಪೂಜೆಯನ್ನು ಮಾಡಿ, ಹಾಗೆಯೇ ಉಳಿದ ವಿಧಿಗಳನ್ನು ಪೂರೈಸಿ, ಹೇಮವಿಧಿಯನ್ನು ಮಾಡಲಾಗುತ್ತದೆ. ದೇವೇಂದ್ರನು ಅಗ್ನಿಕುಮಾರನ ಕಿರೀಟದಿಂದ ಉತ್ಪನ್ನವಾದ ಅಗ್ನಿಯನ್ನು ಹೇಮವಿಧಿಯಿಂದ ಪವಿತ್ರವನ್ನಾಗಿ ಮಾಡಿ, ನಿರ್ವಾಣ ಕಲ್ಯಾಣದ ಸಂಸ್ಕಾರವನ್ನು ಮಾಡುತ್ತಾನೆ. ಹಾಗೆಯೇ ಶುದ್ಧ ಭಕ್ತಿ, ಶ್ರುತಭಕ್ತಿ, ಚಾರಿತ್ರ ಭಕ್ತಿ, ಯೋಗಭಕ್ತಿ, ಶಾಂತಿ ಭಕ್ತಿ, ನಿರ್ವಾಣಭಕ್ತಿಗಳನ್ನು ಇಲ್ಲಿ ವ್ಯಕ್ತಪಡಿಸಿ, ಅಭಿಷೇಕವನ್ನು ಪೂರೈಸಲಾಗುತ್ತದೆ. ಇದಾದ ನಂತರ ಶ್ರುತಪೂಜೆ, ಗಂಗಾ ಪೂಜೆಯನ್ನು ಮಾಡಿ ವಿಸರ್ಜಿಸಲಾಗುತ್ತದೆ. ಅನಂತರ ಸಂಘ ಪೂಜೆಯನ್ನು ಮಾಡಿ, ಅದೇ ದಿವಸ ಅಥವಾಮಾರನೆಯ ದಿವಸ ಅವಭೃತ ಸ್ನಾನ, ಮಹಾ ಹೋಮ, ಧ್ವಜಾರೋಹಣ, ಕಂಕಣ ವಿಸರ್ಜನೆ ಮೊದಲಾದ ಕ್ರಿಯೆಗಳನ್ನು ಮಾಡಿ ಪ್ರತಿಷ್ಠೆಯ ಅಂಗವಾಗಿ ಧರ್ಮ ಪ್ರಭಾವನೆಗೋಸ್ಕರ ಶ್ರೀಬಲಿ ಉತ್ಸವ, ಧರ್ಮೋಪದೇಶ ಮೊದಲಾದ ಕಾರ್ಯಗಳನ್ನು ಮಾಡಲಾಗುತ್ತದೆ.[೧೪]

# ಅಧ್ಯಾಯ - ಆರು

# ಕರಾವಳಿಯ ಗೊಮ್ಮಟಗಳಲ್ಲಿರುವ ಸಾಮ್ಯತೆ ಮತ್ತು ಭಿನ್ನತೆ

## ೬.೧ - ಕರಾವಳಿಯ ಗೊಮ್ಮಟಗಳಲ್ಲಿರುವ ಸಾಮ್ಯತೆ

ಕರಾವಳಿಯ ಗೊಮ್ಮಟಗಳನ್ನು ಹೋಲಿಸಿ ನೋಡಿದರೆ, ಹೆಚ್ಚಿನ ಮಟ್ಟದ ಆಚರಣೆಗಳು ಮತ್ತು ಧಾರ್ಮಿಕತೆಯಲ್ಲಿ ಒಂದೇ ರೀತಿಯ ಸಾಮ್ಯತೆಗಳಿರುತ್ತವೆ.

## ಶಿಲ್ಪದ ನೆಲೆಯಲ್ಲಿ ಸಾಮ್ಯತೆ -

ಕರಾವಳಿಯ ಮೂರು ಗೊಮ್ಮಟ ಬೃಹದಾಕಾರದ ಮೂರ್ತಿಗಳು ಕರ್ನಾಟಕ ಶಿಲ್ಪಕಲೆಯ ವೈಶಿಷ್ಟ್ಯವಾಗಿದೆ. ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದಿರುವ ಆರು ಮೂರ್ತಿಗಳಲ್ಲಿ ಮೂರು ಮೂರ್ತಿಗಳು ತುಳುನಾಡಿನಲ್ಲಿವೆ. ಇವು ತುಳುನಾಡಿನ ಜೈನಧರ್ಮದ ಮಹತ್ವದ ಕೊಡುಗೆ. ಮೂರು ಮೂರ್ತಿಗಳು ಕೂಡ ಕಾಯೋತ್ಸಂಗಭಂಗಿಯಲ್ಲಿಯೇ ಇವೆ. ಮತ್ತು ಕೈಕಾಲುಗಳ ಸುತ್ತಲೂ ಮಾಧವೀ ಲತೆಗಳು ಹಬ್ಬಿರುತ್ತದೆ. ಎದುರಿಗೆ ಬ್ರಹ್ಮಸ್ತಂಭಗಳು ಇವೆ. ಬ್ರಹ್ಮಸ್ತಂಭದ ಮೇಲೆ ಕ್ಷೇತ್ರ ರಕ್ಷಕನಾಗಿ ಹಾಗು ಯಕ್ಷನಾಗಿ ಬ್ರಹ್ಮನ ಮೂರ್ತಿಯನ್ನು ಸ್ಥಾಪಿಸಲಾಗಿರುತ್ತದೆ. ಏಕಶಿಲಾಮಯವಾದ ಗೊಮ್ಮಟ ಮೂರ್ತಿಗಳು ಗಂಭೀರ ಮುಖಭಾವ, ಶಾಂತ ಸ್ನಿಗ್ಧ ಮುಗುಳ್ನಗೆಯನ್ನು ಬೀರುವ ಸುಂದರ ಕಲಾಕೃತಿಗಳಿವು. ಕೇವಲ ಜ್ಞಾನದ ಆನಂದವನ್ನು ಈ ಮುಗುಳ್ನಗೆಯ ಮೂಲಕ ಹೊರಹೊಮ್ಮಿಸುತ್ತದೆ. ಮಹಾಪುರುಷನ ಲಕ್ಷಣದಲ್ಲಿರುವ ಎಲ್ಲಾ ಅಂಶಗಳೂ ಈ ಮೂರ್ತಿಗಳಲ್ಲಿವೆ. ಅಗಲಭುಜ, ವಿಶಾಲ ವಕ್ಷಸ್ಥಳ, ನೀಳ ಕೈಗಳು, ಸಾಮಾನ್ಯ ಮನುಷ್ಯನ ಎತ್ತರವನ್ನು ಮೀರಿದ ದೇಹಪ್ರಮಾಣ, ಬಹುಶ್ರುತ ಜ್ಞಾನವನ್ನು ಸೂಚಿಸುವ ಇಳಿಬಿದ್ದ ಕಿವಿಗಳು, ಅರೆದೆರೆದ ಕಣ್ಣುಗಳು, ಭವ್ಯ ಸೌಂದರ್ಯವನ್ನೂ, ಉನ್ನತ ತ್ಯಾಗವನ್ನೂ ಎತ್ತಿ ಸಾರುತ್ತವೆ. ಇವುಗಳಿಗೆ ಸರಿಸಮವಾದ ಕಲಾಕೃತಿಗಳು ಎಲ್ಲಿಯೂ ಇಲ್ಲವೆಂದು 'ವಾಲ್‌ಹೌಸನು' ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ.

## ಸಾಮಾಜಿಕ ನೆಲೆಯಲ್ಲಿ ಸಾಮ್ಯತೆ -

ಬಾಹುಬಲಿ ಮೂರ್ತಿಗಳ ಆರಾಧನೆ, ಮತ್ತು ಮಹಾಮಸ್ತಕಾಭಿಷೇಕಗಳು ಕೇವಲ ಜೈನಮತೀಯರಿಗೆ ಮಾತ್ರ ಸೀಮಿತವಾಗಿರದೆ, ಇದೊಂದು ಸಾಮಾಜಿಕ, ರಾಷ್ಟ್ರೀಯ ಪರ್ವವಾಗಿಯೂ ಆಚರಿಸಲ್ಪಟ್ಟಿದೆ. ಇದರಲ್ಲಿ ಸರ್ವಧರ್ಮಿಯರೂ ಭಾಗವಹಿಸುತ್ತಾರೆ. ಅಹಿಂಸೆ, ತ್ಯಾಗ, ಶಾಂತಿ ಈ ಗುಣಗಳು ನಮ್ಮ ಭಾರತೀಯ ಸಂಸ್ಕೃತಿಯ ಶಾಶ್ವತವಾದ ಮೌಲ್ಯಗಳಾಗಿರುವುದರಿಂದ, ಬಾಹುಬಲಿಯ ಆರಾಧನೆಯ ಮೂಲಕ ಈ ಗುಣಗಳನ್ನು ಗೌರವಿಸುತ್ತಾರೆ. ಅಹಿಂಸೆ, ತ್ಯಾಗ, ಶಾಂತಿ ಈ ಗುಣಗಳನ್ನು ಗೌರವಿಸುತ್ತಾರೆ. ಈ ಹಿಂದೆ ನಡೆದ ಕಾರ್ಕಳ, ವೇಣೂರು, ಧರ್ಮಸ್ಥಳದ ಬಾಹುಬಲಿ ಮಹಾಮಸ್ತಕಾಭಿಷೇಕದಲ್ಲಿ ಸರ್ವಧರ್ಮದವರೂ ಭಾಗವಹಿಸಿ, ಪುಣ್ಯಭಾಗಿಗಳಾಗಿದ್ದಾರೆ.

'ಕಲ್ಲುರ್ಟಿ-ಕಲ್ಕುಡ'ರು ಅಣ್ಣ-ತಂಗಿ. ತುಂಬಾ ತೊಂದರೆ ಅನುಭವಿಸಿ ಭೂತಗಳಾದವೆಂದೂ, ಅವರು ಹಲವು ಕಡೆ ತಮ್ಮ ನಿವಾಸಗಳನ್ನು ನಿರ್ಮಿಸಿಕೊಂಡು ನೆಲೆಸಿದರೆಂದೂ ಈ ಭಾಗದ ಜನ ನಂಬುತ್ತಾರೆ. ಅವುಗಳು ಅನುಭವಿಸಿದ ತೊಂದರೆಗಳ ಬಗ್ಗೆ, ಭೂತಗಳಾಗಿ ವರ್ತಿಸಿದ ಬಗ್ಗೆ ಕಥೆಗಳು ಪರಂಪರೆಯಾಗಿ ಹಬ್ಬಿಕೊಂಡು ಬಂದು ಜನಜನಿತವಾಗಿ ಹರಡಿವೆ. ಶಂಭು ಕಲ್ಕುಡ ಅಣ್ಣ, ಕಲ್ಲುರ್ಟಿ ತಂಗಿ. ಇಬ್ಬರೂ ಒಬ್ಬ ಶಿಲ್ಪಿಯ ಮಕ್ಕಳು ಅವಳಿ-ಜವಳಿಗಳು. ಇವರು ಹುಟ್ಟುವ ಮುಂಚೆ ಇವರ ತಾಯಿ ಏಳು ತಿಂಗಳ ಗರ್ಭಿಣಿಯಾಗಿದ್ದಾಗ, ತಂದೆ ಬೆಳ್ಗೊಳದ ಅರಸರಿಂದ ಬಂದ ಪತ್ರಕ್ಕನುಗುಣವಾಗಿ ಅಲ್ಲಿಗೆ ಹೋದ. ಕೆಲವು ವರ್ಷಗಳ ಕಾಲ ಅಲ್ಲಿದ್ದು ಗೊಮ್ಮಟ ವಿಗ್ರಹವನ್ನು ನರ್ತಕಿಯರ ನಿವಾಸವನ್ನು, ಬಸದಿಗಳನ್ನು ನಿರ್ಮಿಸಿದ. ಬಹಳ ಮೆಚ್ಚುಗೆ ಪಡೆದು, ಊರಿಗೆ ಹಿಂದಿರುಗಿದ. ಇತ್ತ ಊರಿನಲ್ಲಿ ಕಲ್ಲುರ್ಟಿ ಕಲ್ಕುಡರು ಹುಟ್ಟಿ ಬೆಳೆಯುತ್ತಿದ್ದರು. ತಂದೆಯಿಲ್ಲದ 'ಗಯ್ಯಾಳಿಯ ಮಗ' ನೆಂದು ಜೊತೆಯವರಿಂದ ಹಂಗಿಸಲ್ಪಟ್ಟ ಕಲ್ಕುಡ ತಾಯಿಯಿಂದ, ತಂದೆ ಬೆಳ್ಗೊಳಕ್ಕೆ ಹೋಗಿರುವ ವಿಷಯ ತಿಳಿದು ನೇರವಾಗಿ ಅಲ್ಲಿಗೇ ಹೊರಟು ಬಿಡುತ್ತಾನೆ. ದಾರಿಯಲ್ಲೇ ತಂದೆ ಮಗ ಭೇಟಿಯಾಗುತ್ತಾರೆ. ಮಗನನ್ನು ಪುನಃ ಕರೆದೊಯ್ದು ತಂದೆ ತನ್ನ ಕೃತಿಗಳನ್ನು ತೋರಿಸುತ್ತಾನೆ. ತಂದೆ ಕೂಡಲೇ ಚಾಕುವಿನಿಂದ ಗಂಟಲನ್ನು ಕೊಯ್ದುಕೊಂಡು ಸತ್ತು ಹೋಗುತ್ತಾನೆ.[೧೧]

ಮಗ ಇನ್ನೂ ಚೆಲುವಾದ ವಿಗ್ರಹಗಳನ್ನು ಗೋಮಟೇಶ್ವರನ ಮತ್ತೊಂದು ಪ್ರತಿಮೆಯನ್ನು ಕೆತ್ತುತ್ತಾನೆ. ಆಗ ಅರಸನು ಅಸೂಯೆಯಿಂದ, ಬೇರೆ ಎಲ್ಲಿಯೂ ಇಂತಹ ವಿಗ್ರಹವನ್ನು ಮಾಡದಿರಲೆಂದು ಅವನು ಎಡಗೈ, ಮತ್ತು ಬಲಗೈಯನ್ನು ಕಡಿದುಹಾಕುತ್ತಾನೆ. ನೊಂದ ಕಲ್ಕುಡ ಅಲ್ಲಿ ನೀರು ಕೂಡ ಮುಟ್ಟದೆ, ಪಕ್ಕದ ಊರಾದ ವೇಣೂರಿಗೆ ಹೋಗುತ್ತಾನೆ. ಅಲ್ಲಿಯ ಅರಸರ ಆಶ್ರಯದಲ್ಲಿದ್ದು ವೇಣೂರಿನ ಗೊಮ್ಮಟ ಮೂರ್ತಿಯ ಕೆಲಸ ಮಾಡುತ್ತಾನೆ ಕೆಲವು ಸಮಯದ ನಂತರ ತಂಗಿಯಾದ ಕಲ್ಲುರ್ಟಿಯು ಅಣ್ಣನನ್ನು ನೋಡಲೆಂದು ಊರೂರು ಅಲೆಯುತ್ತಾ ಕಾರ್ಕಳಕ್ಕೆ ಬರುತ್ತಾಳೆ. ಅಲ್ಲಿ ಅಣ್ಣನಿಗಾದ ಕೆಡಕು ತಿಳಿಯುತ್ತಾಳೆ. ಅಲ್ಲಿಂದ ವೇಣೂರಿಗೆ ಅಳುತ್ತಾ ಓಡಿಬರುತ್ತಾಳೆ. ಅಂಗವಿಕಲನಾದ ಅಣ್ಣನನ್ನು ನೋಡಿದೊಡನೆ ಭೈರವರಸರ ಬಗ್ಗೆ ರೋಷ ಉಕ್ಕುತ್ತದೆ. ಇಬ್ಬರೂ ಅವನ ವಿರುದ್ಧ ಸೇಡುತೀರಿಸಲು ನಿಶ್ಚಯಿಸುತ್ತಾನೆ. ದೇವರನ್ನು ಪ್ರಾರ್ಥಿಸಿ, ಮಾಯವಾಗುತ್ತಾನೆ. ನಂತರ ಭೂತಗಳಾಗುತ್ತಾರೆ ಅಲ್ಲಿಂದ ಮುಂದೆ ಕಾರ್ಕಳದಲ್ಲಿ ಭೂತ ಚೇಷ್ಟೆ ಆರಂಭವಾಗುತ್ತದೆ. ಜನರಿಗೆ, ರಾಜನ ತಾಯಿಗೆ, ರಾಜನಿಗೆ, ಅನೇಕ ರೀತಿಯ ಪೇಚಾಟಗಳಾಗುತ್ತವೆ. ಭೂತೋಚ್ಚಾಟನೆಗೆ ಬಂದ ಮಾಂತ್ರಿಕರಿಗೂ ಸಹ ಒದ್ದಾಟಾಗುತ್ತದೆ. ಕೊನೆಗೆ ಅವರಾಗಿಯೇ, ಇನ್ನೊಬ್ಬ ದೂರದ ಪುರೋಹಿತರಿಗೆ ತಮ್ಮನ್ನು ಒಂದೆಡೆ ಸ್ಥಾಪಿಸುವ ವಿಧಾನ ತಿಳಿಸಿ ಅವರು ಅದರಂತೆ ಅನುಸರಿಸಿದಾಗ, ಅವರು ಕಾರ್ಕಳದ ಅರಸ ಹಾಗೂ ಜನರನ್ನು ಪೀಡಿಸುವುದನ್ನು ಕೈಬಿಡುತ್ತಾರೆ. ಬೇರೆಡೆಯ ಜನಗಳಿಗೂ ಸಹ ಇದೇ ರೀತಿ ತಮ್ಮ ಮಹಿಮೆ ತೋರಿಸಿ, ಆಯಾ ಜನಗಳಿಂದ ಅಲ್ಲಲ್ಲಿ ತಮ್ಮ ನೆಲೆಗಳನ್ನು ಸ್ಥಾಪನೆ ಮಾಡಿಕೊಳ್ಳುತ್ತಾರೆ. ಇಂದಿಗೂ ತುಳುನಾಡಿನಲ್ಲಿ ಭೂತಾರಾಧನೆ ಜೀವಂತವಾಗಿರುವುದನ್ನು ಗುರುತಿಸಬಹುದು.

ಈ ಕಥೆ ದಕ್ಷಿಣ ಕನ್ನಡದ ಭೂತಗಳ ಬಗ್ಗೆ, ಸಾಮಾಜಿಕ ಪದ್ಧತಿಗಳ ಬಗ್ಗೆ, ನಂಬಿಕೆ ನಡಾವಳಿಕೆಗಳ ಬಗ್ಗೆ ಅನೇಕ ಅಂಶಗಳನ್ನು ಸೂಚಿಸುತ್ತದೆ.ತುಳುನಾಡಿನಲ್ಲಿ ಕಲ್ಲಿನ ಕೆಲಸ ಮಾಡುವವರನ್ನು ಅಂದರೆ ಶಿಲ್ಪಿಗಳನ್ನು ಕಲ್ಲುಕುಟ್ಟಿಗರು ಎಂದು ಕರೆಯುತ್ತಾರೆ. ದಂತಕಥೆಯ ಪ್ರಕಾರ ಕಾರ್ಕಳ ಮತ್ತು ವೇಣೂರಿನ ಗೊಮ್ಮಟ ಮೂರ್ತಿಗಳನ್ನು ಶಂಭುಕಲ್ಲು ಕುಟ್ಟಿಗ ಎನ್ನುವ ಶಿಲ್ಪಿ ತಯಾರಿಸಿರುವುದರಿಂದ ಮುಂದೆ ಆತ ಭೂತವಾದುದರಿಂದ ಆತನನ್ನು ಕಲ್ಕುಡ ಭೂತ ಎಂಬ ಹೆಸರಿನಿಂದ ಇಂದಿಗೂ ಆರಾಧಿಸುತ್ತಾರೆ. ಭೂತದ ಪಾಡ್ದನಗಳಲ್ಲಿ ಆ ಅಂಶಗಳನ್ನು ಗಮನಿಸಬಹುದು.

ಆದರೂ ನಾವು ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಶ್ರವಣಬೆಳಗೊಳದ ಗೋಮಟೇಶ್ವರ ಮೂರ್ತಿಯ ಕಾಲ ಮತ್ತು ಭೈರವ ಅರಸನ ಕಾಲ ಇಲ್ಲಿ ತುಂಬಾ ಅಂತರವಿರುವ ಕಾರಣ, ಇದು ಕೇವಲ ಕಟ್ಟುಕಥೆಗಳೆಂದು ಊಹಿಸಬಹುದು.

## ಆಚರಣೆಯ ನೆಲೆಯಲ್ಲಿ ಸಾಮ್ಯತೆ

ಆಚರಣೆಯ ನೆಲೆಯಲ್ಲಿ ಮೂರು ಗೊಮ್ಮಟಮೂರ್ತಿಗಳು ಸಮಾನ ನೆಲೆಯಲ್ಲಿಯೇ ಆಚರಣೆಗೊಳಪಡುತ್ತವೆ. ದಿನಾಲೂ ಬಾಹುಬಲಿಗೆ ಅಭಿಷೇಕಗಳು ನಡೆಯುತ್ತವೆ. ಆದರೆ ಬೃಹದಾಕಾರದ ದೊಡ್ಡ ಮೂರ್ತಿಗೆ ಅಲ್ಲ. ಸಣ್ಣ ಬಿಂಬವನ್ನು ಇಟ್ಟು ದಿನಗಳಲ್ಲಿ ಎರಡು ಹೊತ್ತು ಅಂದರೆ ಮಧ್ಯಾಹ್ನ ಮತ್ತು ರಾತ್ರಿ ಪೂಜೆಗಳನ್ನು ನಡೆಸಲಾಗುತ್ತದೆ. ದೊಡ್ಡ ಮೂರ್ತಿಗೆ ಮಾತ್ರ 12 ವರ್ಷಗಳಿಗೊಮ್ಮೆ ಮಹಾಮಸ್ತಕಾಭಿಷೇಕವನ್ನು ನಡೆಸಲಾಗುತ್ತದೆ. ಸಣ್ಣ ಬಿಂಬವನ್ನು ಪೂಜೆ ನಡೆದ ಬಳಿಕ ಅದನ್ನು ಜಿನಾಲಯದಲ್ಲಿ ಇಲ್ಲವೇ ನಿರ್ದಿಷ್ಟವಾದ ಸ್ಥಳದಲ್ಲಿ ಇಡುತ್ತಾರೆ. ಈ ಬಿಂಬವನ್ನು ಪ್ರತಿಬಿಂಬವೆಂದು ಕರೆಯುತ್ತಾರೆ. ಹಾಗೆಯೇ ಬಾಹುಬಲಿಕ್ಷೇತ್ರದ ಕ್ಷೇತ್ರ ರಕ್ಷಕನಾಗಿ ಬ್ರಹ್ಮಸ್ತಂಭದಲ್ಲಿ ಆಸೀನನಾಗಿರುವ ಬ್ರಹ್ಮನಿಗೆ ಕೂಡ ಪೂಜಾ ಕಾರ್ಯಗಳನ್ನು ಮಾಡಲಾಗುತ್ತದೆ.(ಚಿತ್ರ - ೧೦)

## ೬. ೨ - ಕರಾವಳಿಯ ಗೊಮ್ಮಟಗಳಿಗಿರುವ ಭಿನ್ನತೆಗಳು

ಕರಾವಳಿಯ 3 ಗೊಮ್ಮಟಗಳಿಗೆ ಅನೇಕ ರೀತಿಯ ಭಿನ್ನತೆಗಳಿವೆ. ಆರಾಧನೆಯ ನೆಲೆಯಲ್ಲಿ ಸಮಾನತೆ ಇದ್ದರೂ, ಶಿಲ್ಪದ ನೆಲೆಯಲ್ಲಿ, ಚಾರಿತ್ರಿಕ ನೆಲೆಯಲ್ಲಿ, ಆರ್ಥಿಕ ನೆಲೆಯಲ್ಲಿ ಬಹಳ ವ್ಯತ್ಯಾಸಗಳಿವೆ.

ಎತ್ತರದಲ್ಲಿ ಕಾರ್ಕಳದ 42 ಅಡಿ ಎತ್ತರದ ವಿಗ್ರಹ ಮೊದಲನೆಯ ಸ್ಥಾನವಾಗಿದೆ. ಎರಡನೆಯ ಸ್ಥಾನ ಧರ್ಮಸ್ಥಳದ ಬಾಹುಬಲಿಗೆ. ಇದರ ಎತ್ತರ 39 ಅಡಿಗಳು. ಮೂರನೆಯ ಸ್ಥಾನ ವೇಣೂರಿನ ಬಾಹುಬಲಿಗೆ ಇದರ ಎತ್ತರ 35 ಅಡಿಗಳು.

ಕಾರ್ಕಳದ ಮೂರ್ತಿಯನ್ನು ಅಲ್ಲಿಯೇ ಬಾಹುಬಲಿಬೆಟ್ಟದ ಕೆಳಗೆ ನಿರ್ಮಿಸಿದರೆ, ವೇಣೂರಿನ ಮೂರ್ತಿಯನ್ನು ಕಲ್ಯಾಣಿ ಎಂಬ ಸ್ಥಳದಲ್ಲಿ ಕೆತ್ತಲಾಯಿತು. ಧರ್ಮಸ್ಥಳದ ಮೂರ್ತಿಯನ್ನು ಕಾರ್ಕಳದ ಹತ್ತಿರ ಇರುವ ಮಂಗಳಪಾದೆ ಎಂಬ ಸ್ಥಳದಲ್ಲಿ ಕೆತ್ತಲಾಯಿತು. ಇದೇ ಸ್ಥಳದಲ್ಲಿ ಇನ್ನೊಂದು ಮೂರ್ತಿಯನ್ನು ಕೆತ್ತಿ ಉತ್ತರ ಪ್ರದೇಶದ, ಫಿರೋಜಾಬಾದಿಗೆ ಕಳುಹಿಸಲಾಯಿತು. ಇದು 29 ಅಡಿ ಎತ್ತರದ ಬಾಹುಬಲಿ ಮೂರ್ತಿಯಾಗಿದ್ದು, ಇತ್ತೀಚೆಗೆ ಅಂದರೆ ಇಪ್ಪತ್ತನೆಯ ಶತಮಾನದ ಕಡೆಯ ದಶಕದಲ್ಲಿ ನಿಲ್ಲಿಸಿದ್ದು, ಇದನ್ನು ಧರ್ಮಸ್ಥಳದ ಮೂರ್ತಿ ಶಿಲ್ಪಿಯಾದ ರೆಂಜಾಳ ಗೋಪಾಳ ಶೆಣೈಯವರೇ ನಿರ್ಮಿಸಿದ್ದಾರೆ. ಕಾರ್ಕಳದಿಂದ ಈ ದೊಡ್ಡ ಕಲ್ಲಿನ ಪ್ರತಿಮೆ ಟ್ರಾಲಿಗಳ ಮೂಲಕ ಮಂಗಳೂರು ಸೇರಿತು. ಅನಂತರ ಮಂಗಳೂರಿಂದ ವಿಶೇಷ ರೈಲಿನಲ್ಲಿ ಪ್ರಯಾಣ. ಹೀಗೆ ಇದು ಉತ್ತರ ಪ್ರದೇಶಕ್ಕೆ ದಕ್ಷಿಣ ಕರ್ನಾಟಕದ ಕೊಡುಗೆಯಾಗಿದೆ.

ಕಾರ್ಕಳ ಮತ್ತು ಧರ್ಮಸ್ಥಳದ ವಿಗ್ರಹಗಳು ಬೆಟ್ಟದ ಮೇಲೆ ಇದೆ. ಆದರೆ ವೇಣೂರಿನ ವಿಗ್ರಹವು ಸಮತಟ್ಟಾದ ಪ್ರದೇಶದಲ್ಲಿ ಸ್ಥಾಪನೆಗೊಂಡಿದೆ. ಕಗ್ಗಲ್ಲು ಹಾಸಿನ ಮುಖಮಂಟಪ, ಆಕರ್ಷಕ ಧ್ವಜಸ್ತಂಭ, ಪೀಠವನ್ನೇರುವ ಉಭಯ ಪಾರ್ಶ್ವಗಳಲ್ಲಿ ಕಲ್ಲಿನಿಂದ ನಿರ್ಮಾಣಗೊಂಡ ಆನೆಗಳು, ಮೂರ್ತಿಯ ಹಿಂದೆ ಕಲ್ಲು ಚಪ್ಪರವನ್ನು ನಿರ್ಮಿಸಲಾಗಿದೆ.

ಧರ್ಮಸ್ಥಳದ ಬಾಹುಬಲಿ ವಿಗ್ರಹದ ವಿಶೇಷಗಳೆಂದರೆ, ಎರಡೂ ಪಾದದ ಬಳಿ ಹರಿದಾಡುವ ಸರ್ಪಗಳನ್ನು ತೋರಿಸಿದ್ದಾರೆ. ವಿಗ್ರಹದ ಪಾದ, ತೋಳು, ತೊಡೆಗಳನ್ನು ಬಳಸಿದ ಮಾಧವೀ ಲತೆ, ಇದರಲ್ಲಿ ಅರಳಿದ ಹೂವುಗಳು, ಪಾದದ ಬಳಿಯಿರುವ ಎರಡು ಪ್ರತ್ಯೇಕ ಶಿಲೆಯಲ್ಲಿ ಮಾವಿನ ಮರ, ಗಿಳಿ, ಮಂಗ, ಜೇನುಗೂಡಿನ ಆಕರ್ಷಕವಾದ ಕೆತ್ತನೆಗಳು ಪಾದದ ಬಳಿಯಲ್ಲಿ ಎರಡು ಆನೆಗಳು ತಮ್ಮ ಸೊಂಡಿಲಿನಿಂದ ಪಾದವನ್ನು ಸ್ಪರ್ಶಿಸುತ್ತವೆ. ಇಕ್ಕೆಲಗಳಲ್ಲಿ ಇಬ್ಬರು ದೇವಸ್ತ್ರೀಯರು ನಿಂತುಕೊಂಡು ಕೇವಲ ಜ್ಞಾನಿಯಾದ ಬಾಹುಬಲಿಯನ್ನು ಗೌರವಿಸುತ್ತಿರುವಂತೆ ತೋರಿಸಲಾಗಿದೆ.

ಕಾರ್ಕಳದ ಶಿಲ್ಪ ನಿರ್ಮಾಣಕ್ಕೆ ಸ್ಫೂರ್ತಿ ಶ್ರವಣಬೆಳಗೊಳದ ಗೊಮ್ಮಟೇಶ್ವರನ ಶಿಲ್ಪ, ಗಂಭೀರ ಮುಖಭಾವ, ಶಾಂತ ಸ್ನಿಗ್ಧ ಮುಗುಳ್ನಗೆಯನ್ನು ಬೀರುವ ಸುಂದರ ಕಲಾಕೃತಿಯಿದು. ಕೇವಲ ಜ್ಞಾನದ ಆನಂದವನ್ನು ಈ ಮುಗುಳ್ನಗೆಯ ಮೂಲಕ ಗೊಮ್ಮಟನು ಹೊರಹೊಮ್ಮಿಸುತ್ತಿದ್ದಾನೆ.

ಕಾರ್ಕಳ ಮತ್ತು ವೇಣೂರಿನ ಗೊಮ್ಮಟ ಮೂರ್ತಿಗಳ ಎದುರು ಎಡಭಾಗದಲ್ಲಿ ಮತ್ತು ಬಲಭಾಗದಲ್ಲಿ ಜೈನ ಬಸದಿಗಳಿವೆ. ಧರ್ಮಸ್ಥಳದಲ್ಲಿ ಇವು ಇಲ್ಲ. ಆದರೆ ಧರ್ಮಸ್ಥಳದ ಮೂರ್ತಿಯು ಇತ್ತೀಚಿನ ದಶಮಾನದ ಮೂರ್ತಿಯಾಗಿದೆ. ಇಂದೂ ಕೂಡ ಶಿಲ್ಪ ನಿರ್ಮಾಣದ ಕಲೆಯು ಜೀವಂತವಾಗಿದೆ ಎನ್ನುವುದಕ್ಕೆ ಧರ್ಮಸ್ಥಳದ ಮೂರ್ತಿ ನಿರ್ಮಾಣವು ಸಾಕ್ಷಿಯಾಗಿದೆ.

ಕಾರ್ಕಳ ಮತ್ತು ವೇಣೂರಿನ ಗೊಮ್ಮಟ ಮೂರ್ತಿಗಳಿಗೆ ಮಹಾಮಸ್ತಕಾಭಿಷೇಕ ನಡೆದ ಬಳಿಕ ಕಲ್ಕುಡ ಎಂಬ ಭೂತಕ್ಕೆ ನೇಮೋತ್ಸವವನ್ನು ಮಾಡುವ ಪದ್ಧತಿ ಹಿಂದಿನ ಪರಂಪರೆಯಿಂದ ಬಂದಿದೆ. ಆದರೆ ಧರ್ಮಸ್ಥಳದ ಗೋಮಟೇಶ್ವರನ ಮಹಾಮಸ್ತಕಾಭಿಷೇಕ ನಡೆದ ಬಳಿಕ ನೇಮೋತ್ಸವ ಮಾಡುವ ಪದ್ಧತಿ ಇಲ್ಲ.

## ೬. ೩ - ರಾಷ್ಟ್ರಕವಿಗಳು ಕಂಡ ಗೋಮಟೇಶ್ವರ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇಪ್ಪತ್ತನೆಯ ಶತಮಾನವು ವೈವಿಧ್ಯಪೂರ್ಣವಾದ ಕವಿತಾ ರಚನೆಗಳಿಗೆ ಜನ್ಮವಿತ್ತಿರುವುದನ್ನು ಕಾಣಬಹುದು. ವಸ್ತು, ವರ್ಣನೆ, ಭಾಷೆ, ಛಂದಸ್ಸು ಎಲ್ಲ ವಿಷಯಗಳಲ್ಲೂ ಕನ್ನಡ ಕವಿತೆ ರಂಗು ರಂಗಿನ ಲೋಕವನ್ನೇ ಸೃಷ್ಟಿಸಿದೆ.

ಕನ್ನಡದಲ್ಲಿ ಪ್ರಕೃತಿ ಗೀತೆಗಳು, ಧಾರ್ಮಿಕ ಗೀತೆಗಳು, ವ್ಯಕ್ತಿಗೀತೆಗಳು, ಆದರೆ ಕಲಾಜಗತ್ತಿಗೆ ಸಂಬಂಧಿಸಿದಂತೆ ಜಗತ್ಪ್ರಸಿದ್ಧ ಶಿಲ್ಪಕಲಾ ತಾಣಗಳ ಬಗ್ಗೆ ಹಾಗೂ ಶಿಲ್ಪಕಲಾಕೃತಿಗಳ ಬಗ್ಗೆ ರಚಿತವಾದ ಕವನಶಿಲ್ಪಗಳು ಸಾಕಷ್ಟಿಲ್ಲ. ಕನ್ನಡನಾಡು ಶಿಲ್ಪಕಲಾ ಕೃತಿಗಳ ಆಗರವಾಗಿದ್ದು ಅನೇಕರಿಗೆ ಸ್ಫೂರ್ತಿ ಆನಂದಗಳನ್ನು ನೀಡುತ್ತಿದ್ದರೂ ಹೆಚ್ಚು ಮಂದಿ ಕವಿಗಳ ಮನ ಅತ್ತ ಹಾಯದೆ ಇರಲು ಕಾರಣ ತಿಳಿಯದಾಗಿದೆ.

ಕೆಲವೇ ಮಂದಿ ಕವಿಗಳು ನಮ್ಮ ನಾಡಿನ ಸುಂದರ ಶಿಲ್ಪ ಕಲಾಕೃತಿಗಳನ್ನು ಕಂಡು ಆನಂದಿಸಿ ತಮ್ಮ ಸ್ಫೂರ್ತಿ, ಕಲ್ಪನೆ, ಅನುಭವಗಳನ್ನು ಕವಿತೆಗಳ ಮೂಲಕ ಜನತೆಯ ಮುಂದಿಟ್ಟಿದ್ದಾರೆ.[೨]

ಗೊಮ್ಮಟನನ್ನು ಕುರಿತು ಕನ್ನಡದಲ್ಲಿ ಡಿ.ವಿ.ಜಿ, ಪು.ತಿ.ನ, ಕಣವಿ, ಕುವೆಂಪು, ಗೋವಿಂದ ಪೈ, ಇತ್ಯಾದಿ ಜೈನೇತರ

ಕವಿಗಳು ಶ್ರೇಷ್ಠಮಟ್ಟದ ಕವಿತೆಗಳನ್ನು ರಚಿಸಿದ್ದಾರೆ. ಕಾ.ಸ. ಧರಣೇಂದ್ರಯ್ಯ, ಜೈನಮಹಿಳೆಯರು, ವೈ.ಜಿ. ಶಾಂತರಾಜು ಮೊದಲಾದ ಜೈನಕವಿಗಳು ಗೊಮ್ಮಟನನ್ನು ಕುರಿತು ಸಾಕಷ್ಟು ಚೆನ್ನಾದ ಕವಿತೆಗಳನ್ನು ರಚಿಸಿದ್ದರೂ ಅವುಗಳು ಜೈನೇತರ ಕವಿಗಳ ರಚನೆಗಳ ಗುಣಮಟ್ಟಕೇರಿಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ.

೧೯೪೯ ರಲ್ಲಿ ಮದ್ರಾಸ್ ಸರಕಾರದಿಂದ ರಾಷ್ಟ್ರಕವಿ ಪ್ರಶಸ್ತಿಗೆ ಪಾತ್ರರಾದವರು ಶ್ರೀ ಗೋವಿಂದ ಪೈ ಅವರು. ಹಾಗೆಯೇ ಕುವೆಂಪು ಅವರು ೧೯೬೫ ರಲ್ಲಿ ಕರ್ನಾಟಕ ಸರಕಾರದಿಂದ ರಾಷ್ಟ್ರಕವಿ ಪ್ರಶಸ್ತಿ ಪಡೆದರು. ಈ ಇಬ್ಬರು ಶ್ರೇಷ್ಠಕವಿಗಳು ಗೊಮ್ಮಟನನ್ನು ಕುರಿತು ರಚಿಸಿದ ಕವಿತೆಗಳು 'ಕನ್ನಡದ ಶ್ರೇಷ್ಠ ಗೊಮ್ಮಟ ಗೀತೆಗಳ' ಸಾಲಿಗೆ ಸೇರಿವೆ.

ಗೋವಿಂದ ಪೈ ಅವರು ತಮ್ಮ ಕವಿತೆ ಶ್ರೀ ಗೊಮ್ಮಟ ಜಿನಸ್ತುತಿಯನ್ನು ೧೯೨೮ ರಲ್ಲಿ ತಮ್ಮ ಸಹಧರ್ಮಿಣಿ ಅವರಿಗೆ ನೆನಪಿನ ಕಾಣಿಕೆಯನ್ನಾಗಿ ರಚಿಸಿದರು. ವಿವಿಧ ವೃತ್ತಗಳಲ್ಲಿ ರಚಿತವಾದ ಪ್ರಾಸ ರಹಿತ ರಚನೆಗೆ ಪ್ರಸಿದ್ಧವಾದ ೩೫ ಪದ್ಯಗಳುಳ್ಳ ಸುದೀರ್ಘ ಗೊಮ್ಮಟ ಗೀತೆಯಾಗಿದೆ. ಶ್ರೀ ಗೋವಿಂದ ಪೈ ಅವರು ಗೊಮ್ಮಟನನ್ನು ಕುರಿತು ಕುವೆಂಪು ಅವರಂತೆ ಕವಿತೆ ಬರೆದ ಕವಿಗಳಷ್ಟೇ ಅಲ್ಲ, ಗೊಮ್ಮಟನ ವಿಚಾರವಾಗಿ ಆಳವಾಗಿ ಸಂಶೋಧನೆ ನಡೆಸಿದ ಧೀಮಂತ ವಿದ್ವಾಂಸರು ಹೌದು. ನಮ್ಮ ನಾಡಿನ ಗೊಮ್ಮಟ ಮೂರ್ತಿಗಳ ಸ್ಥಾಪನೆ, ಇತಿಹಾಸದ ಬಗೆಗೆ ಹಾಗೂ ಜೈನಧರ್ಮಕ್ಕೆ ಸಂಬಂಧಿಸಿದಂತೆ ಆಳವಾದ ಅಧ್ಯಯನ ಮಾಡಿ ವಿದ್ವತ್ಪೂರ್ಣ ಪ್ರಬಂಧಗಳನ್ನು ರಚಿಸಿದ್ದಾರೆ.

ಶ್ರೀ ಗೋವಿಂದ ಪೈ ಅವರು ರಚಿಸಿರುವ 'ಗೊಮ್ಮಟ ಜಿನಸ್ತುತಿ', 'ವೇಣೂರಿನ ಬಾಹುಬಲಿ' ಯನ್ನು ಕುರಿತದ್ದು, ಈ ಮಾತನ್ನು ಅವರು ತಮ್ಮ ಕವಿತೆಯಲ್ಲಿ ತಿಳಿಸಿದ್ದಾರೆ.

ವಂದಿಪೆನಾದಿದೇವಸುತನಂ, ಜಿತಚಕ್ರಿಯ ಪೌದೇಶನ
ನ್ನಂತಿಮದೇಹ ನಿತ್ಯಯುವನಂ ಸ್ಮರರೂಪನನಂತ ಮೋಕ್ಷಲ

ಸಾಂಪ್ರದಾಯಕ ಛಂದದಲ್ಲಿ (ವೃತ್ತಗಳಲ್ಲಿ) ರಚಿಸಿದ್ದರೂ ಸಾಂಪ್ರದಾಯಿಕವಾಗಿ ಪ್ರಾರಂಭಿಸಿದರೂ ಕವಿತೆಯ ನಡುವೆ ಸುಂದರ ಕಲ್ಪನೆಗಳಿಂದ ಸೊಗಸಾದ ನಿರೂಪಣೆಯಿಂದ ಕಾವ್ಯರಸಿಕರ ಹೃನ್ಮನಗಳನ್ನು ಸೆಳೆಯುತ್ತಾನೆ. ಈ ಬಗ್ಗೆ ಎಸ್. ಅನಂತನಾರಾಯಣ ಅವರು ತಮ್ಮ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ. ಗೋವಿಂದ ಪೈ ಅವರ ಶ್ರೀ ಗೊಮ್ಮಟ ಜಿನಸ್ತುತಿ ಯು 35 ನುಡಿಗಳುಳ್ಳ ಪ್ರಗಾಥ ಶ್ರವಣಬೆಳಗೊಳ, ಕಾರ್ಕಳ, ವೇಣೂರು ಈ ಮೂರು ಊರುಗಳಲ್ಲಿರುವ ಶ್ರೀ ಗೊಮ್ಮಟೇಶ್ವರ ವಿಗ್ರಹಗಳನ್ನು ಕುರಿತು ಈ ಪ್ರಗಾಥವನ್ನು ರಚಿಸಿದಂತೆ ತೋರುತ್ತದೆ. ಭರತ ಬಾಹುಬಲಿಯ ಕಥೆಯನ್ನು ಸಣ್ಣದಾಗಿ ಹೇಳಿದ್ದಾರೆ. ಅನಂತರ ಗೊಮ್ಮಟ ವಿಗ್ರಹದ ಶಾಂತಿ, ಜೀವಂತತೆಗಳನ್ನು ಕುರಿತು ವರ್ಣನೆ ಬಂದಿದೆ. ಜೈನಧರ್ಮ ತತ್ವಗಳ ನಿರೂಪಣೆಯಿದೆ. ಕೊನೆಯಲ್ಲಿ ಜಗತ್ತನ್ನು ಕಾಪಾಡಲು ಮತ್ತೆ ತನ್ನ ಕೃಪೆಯನ್ನು ಜನರ ಮೇಲೊಸರಬೇಕೆಂದು ಕವಿ ಗೊಮ್ಮಟೇಶ್ವರನನ್ನು ಪ್ರಾರ್ಥಿಸಿ ಕೊಳ್ಳುತ್ತಾರೆ.

ಪೈ . ಅವರು ಈ ಸ್ತುತಿಯಲ್ಲಿ ಸುಂದರ ಕಲ್ಪನೆಗಳನ್ನು ಸೊಗಸಾದ ನಿರೂಪಣೆಯೊಂದಿಗೆ ನೀಡಿ ಕಾವ್ಯರಸಿಕರ ಮನಸ್ಸನ್ನು ಸೆಳೆಯುತ್ತಾರೆ. ಅವರ ಸಿದ್ಧಿಯ ಕಲ್ಪನೆಗೆ ಈ ಸಾಲುಗಳನ್ನು ಗಮನಿಸಬಹುದು.

" ಕಲ್ಲಿನ ಗೊಂಬೆಯಲ್ಲಮಿದು - ಕಲ್ನಗಲಾರ್ಪುದೆ ?
ಗುಂಗುರುಪ್ಪುದೇ ?

ಮುಚ್ಚಲು ಬಿಚ್ಚಲೇಂಬಹುದೆ ? ಕೊಕ್ಕಲು
ಸಕ್ಕಲ ಕಲ್ಲು ಬಲ್ಲುದೇ ?

ಇನ್ನು ಕಲ್ಲಾಗಿ ಗೊಮ್ಮಟ ನಿಲ್ಲಲು ಕಾರಣ ಹೇಳುವ ನುಡಿಗಳು ಹೀಗಿವೆ -

ಜಿತಾತ್ಮಗೆ ಜಗಜ್ಜೇತಾರನೆಂದಾಯ್ದು
ತಜ್ಜಿತಿಯಂ ನೀಗಿದೆ

ಸಾರ್ವಭೌಮ ಪದಮುಮಂ। ಕೊಂಡೊಯ್ದನೇ
ತಾನದನ್ನ ಕಟಾ।

ಚಿನ್ನಕ್ಕೆತಕ್ಕೆ ? ಧಿಕ್ಕೆನುತ ನೀಂ
ಕಲ್ಲಾದೆಯಾ? ಗೊಮ್ಮಟಾ

ಗೊಮ್ಮಟ ಮೂರ್ತಿಯಲ್ಲಿ ಬಹಿರಂಗ ಸೌಂದರ್ಯದಲ್ಲೇ ಅಂತರಂಗದ ಸೌಂದರ್ಯವೂ ಅಡಗಿರುವುದನ್ನು ಪೈ ಅವರು ಕಂಡಿದ್ದಾರೆ.

ಧರುಮದ ಬಾಗಿಲಂಬಕಮೆ! ಸತ್ಯದ ತಾಯ್ಗನಿ
ಬಾಯೆ!

ನಾಸಿಕಂ ವಿಷಯಕುಠಾರಕಂ! ಸ್ಮಿತಮೆ ಜಾಹ್ನವಿ

ಶಾಂತಿವಿಯಲ್ಲಲಾಟ! ನೀನ್ನೆದೆಯೆದಯಾಬ್ಧಿ!
ಶೌರ್ಯದುರುಶೃಂಗಮೆ

ತೋಳ್! ತಲೆ ಜ್ಞಾನ ಕಾನನಂ! ತವ ಪದ
ಮಲ್ತೆ ಮುಕ್ತಿಪದಂ!

ಪೈ ಅವರ ಜಿನಸ್ತುತಿಯಲ್ಲಿ ಎಲ್ಲಾ ಪದ್ಯಗಳು ಒಂದೇ ಮಟ್ಟದ ರಸಾನುಭವವನ್ನು ನೀಡುತ್ತದೆ ಎನ್ನಲಾಗದು. ಉದಾಹರಣೆಗೆ ಮೊದಲ ಪದ್ಯದಲ್ಲಿ ಪ್ರಥಮಾ ವಿಭಕ್ತಿಯಿಂದ ಸಪ್ತಮಿ ವಿಭಕ್ತಿಯವರೆಗೆ ಎಲ್ಲ ವಿಭಕ್ತಿ ಪ್ರತ್ಯಯಗಳನ್ನೂ ಗೊಮ್ಮಟ ಶಬ್ದಕ್ಕೆ ಹೆಚ್ಚಿರುವುದರ ವಿಶೇಷವೇನಿಲ್ಲ . ಆ ಪದ್ಯ ಹೀಗಿದೆ.

ಶ್ರೀ ಜಿನ ಗೊಮ್ಮಟಂ ಜಯಿಕೆ। ಗೊಮ್ಮಟನಂ
ನುತಿಪೆಂ।

ವಿರಕ್ತರಾರ್ ಗೊಮ್ಮಟನಿಂದೆ? ಗೊಮ್ಮಟನಿಗಾರೆಣೆ?

ಗೊಮ್ಮಟನತ್ತಣಿಂದ ತಾನೆ ಗೊಮ್ಮಟ ಮಾಯ್ತೆ

ಮುಕ್ತಿ?

ಗಡ ಗೊಮ್ಮಟ ನೋಡೆಯೆ? ನಿಲ್ಗೆ ಮನ್ಮನಂ

ಗೊಮ್ಮಟನಲ್ಲಿ

ಕಾವುದ ಪರಾಂಬುಧಿ ಸಹ್ಯ ಗಿರೀಶ! ಗೊಮ್ಮಟಾ!

ಜೈನ ಧರ್ಮದ ತತ್ವಗಳನ್ನು ಅಲ್ಲಲ್ಲಿ ಸಂಕ್ಷಿಪ್ತವಾಗಿ ಸುಂದರವಾಗಿ ನಿರೂಪಿಸಿದ್ದಾರೆ..."ಪಗೆಯುಂಟೇ ಜಗದಲ್ಲಿ ವಾಂಛೆಗಳಿನನ್ಯಂ? ಶತ್ರುಂಜಯಂ ವಾಂಛೆಯಂ ಸದೆದಾತಂ! ಪ್ರತಿ ಪುದ್ಗಲಂ ಜಿನನಹಂ ಕ್ಷೀಣಾಷ್ಟ ಕರ್ಮಂ...

ಹೀಗೆ ಗೊಮ್ಮಟನ ಪೂರ್ವವೃತ್ತಾಂತ, ತ್ಯಾಗದ ಮಹಿಮೆ, ಶಿಲ್ಪದ ಹಿರಿಮೆ, ಗುಣಗಳ ಅಗ್ಗಳಿಕೆ, ಜೈನಧರ್ಮದ ಹೆಮ್ಮೆ ಮೊದಲಾದ ಸಂಗತಿಗಳನ್ನೆಲ್ಲವನ್ನು ಒಳಗೊಂಡ ನಮ್ಮ ನಾಡಿನ ಗೊಮ್ಮಟಮೂರ್ತಿಗಳ ಪ್ರಾತಿನಿಧಿಕ ಸಮಗ್ರ ಚಿತ್ರಣವನ್ನು ಪರಿಣಾಮಕಾರಿಯಾಗಿ ಪೈ ಅವರು ತಮ್ಮ ಶ್ರೀ ಗೊಮ್ಮಟೇಶ್ವರ ಸ್ತುತಿಯಲ್ಲಿ ಜನತೆಗೆ ನೀಡಿದ್ದಾರೆ. ಕನ್ನಡಕ್ಕೆ ಶ್ರೇಷ್ಠ ಗೊಮ್ಮಟ ಗೀತೆಯನ್ನು ಕಾಣಿಕೆಯನ್ನಾಗಿ ನೀಡಿದ್ದಾರೆ. ಕುವೆಂಪು ಅವರು ತಮ್ಮ 3 ಕವಿತೆಗಳಲ್ಲಿ ವ್ಯಕ್ತಗೊಳಿಸಿರುವ ಸಂಗತಿಗಳನ್ನೂ ಅವುಗಳ ಸೊಗಸನ್ನೂ ಜಿ. ಪಿ. ರಾಜರತ್ನಂ ಅವರು ತಮ್ಮ 'ಕಾರ್ಕಳ ಗೊಮ್ಮಟಸ್ವಾಮಿ' ಗ್ರಂಥದಲ್ಲೂ, ಶ್ರೀ ಎಂ. ಎ. ಜಯಚಂದ್ರ ಅವರು ತಮ್ಮ 'ರಾಷ್ಟ್ರಕವಿ ಕಂಡ ಗೊಮ್ಮಟೇಶ್ವರ' ಲೇಖನದಲ್ಲೂ ಸಾಕಷ್ಟು ವಿವರವಾಗಿಯೇ ಪ್ರಸ್ತಾವಿಸಿದ್ದಾರೆ. ಇಲ್ಲಿ ಇಬ್ಬರು ರಾಷ್ಟ್ರ ಕವಿಗಳ ಗೊಮ್ಮಟ ಚಿತ್ರಣದಲ್ಲಿ ಕಂಡು ಬರುವ ಸಾದೃಶ್ಯಾಂಶಗಳ ಮತ್ತು ವಿಶೇಷಾಂಶಗಳನ್ನು ಕುರಿತು ಪ್ರಸ್ತಾಪ ಮಾಡಿದೆ. ಗೋವಿಂದ ಪೈ ಅವರು ತಮ್ಮ ಕವಿತೆಯಲ್ಲಿ ಗೊಮ್ಮಟ ಕಥನವನ್ನು ಪಂಪನ ಆದಿಪುರಾಣದ ಕಥಾ ಸರಣಿ ಅನುಸರಿಸಿ ನೀಡಿದ್ದಾರೆ. ಕುವೆಂಪು ಅವರು ತಮ್ಮ ಪ್ರಗಾಥದಲ್ಲಿ ಕಥಾನುಸರಣಿಯನ್ನು 'ಭರತ - ಬಾಹುಬಲಿ' ಕಥೆಯ ಮುಖ್ಯ ಘಟನೆಗಳಿಗೆ ಸಂಬಂಧಿಸಿದ ಪಂಪನ ಪದ್ಯಗಳನ್ನು ಉದ್ಧರಿಸಿಕೊಳ್ಳುತ್ತಾ ತಮ್ಮ ಆಲೋಚನಾ ಬಳ್ಳಿಯ ಕುಡಿವಡೆಸುತ್ತಾರೆ.' ಸುಮಾರು ಕಾಲು ಭಾಗದ ಕವಿತೆ ಪಂಪನ ಪದ್ಯಗಳ ಉದ್ಧರಣೆಯಿಂದ ಕೂಡಿದೆ.

ಗೋಮಟೇಶ್ವರ ಕವಿತೆಯು ಅಪ್ರಕೃತ ಪ್ರಸ್ತಾಪಗಳು ಪ್ರಗಾಥಗಳಲ್ಲಿ ಬರುತ್ತದೆ. ಆದರೆ ಒಟ್ಟು ಮೂಡಿಕೆಯಲ್ಲಿ ಅವು ಕವಿತೆಯಲ್ಲಿ ಸಾಮರಸ್ಯದಿಂದ ಕೂಡಿಕೊಂಡಿರುತ್ತವೆ. ಎಂಬ ಮಾತಿಗೆ ನಿದರ್ಶನವಾಗಿದೆ. ಕವಿತೆಯನ್ನು ರಚಿಸಿದ ಸನ್ನಿವೇಶಗಳು, ರಾಜಕೀಯ ಸ್ಥಿತಿ ಇವು ಈ ಕವಿತೆಯಲ್ಲಿ ಭಿನ್ನವಸ್ತುವಾದರೂ ತಲೆಹಾಕಿವೆ. ಆದರೆ ಕವಿತೆಯ ಯಶಸ್ಸಿಗೆ ಧಕ್ಕೆ ತಂದಿಲ್ಲ ಪೂರಕವಾಗಿದೆ. ಉದಾಹರಣೆಗೆ ಭಾರತ ಬ್ರಿಟಿಷರ ದಬ್ಬಾಳಿಕೆಗೆ ಒಳಗಾದ ಭಾರತೀಯರ ಬವಣೆಯ ಚಿತ್ರವನ್ನು ಈ ಕವಿತೆಯಲ್ಲಿ ಹೃದಯಸ್ಪರ್ಶಿಯಾಗಿ ನೀಡಿದ್ದಾರೆ.

ವಾರಿಧಿಯ ದಾಂಟ ಬೇ ಹಾರ ಕೈತಂದರಂ

ಕ್ರಿಸ್ತವೇಶವನಾಂತ ಸೈತಾನನಾಚಾರದಿಂ

ಭಾರತೀಯ ಪಣೆಯಿಂದ ಪದಕಿಳಿದ

ಶೋಣಿತಮುಮಂ

ನೋಡಿರುವೆಯದರಿಂದ ಭಾರತಿಗೆ ನೀನೇ ಸಾಕ್ಷಿ

ಎಂದು ಶತಮಾನಗಳಿಂದ ನಿಂದ ಗೊಮ್ಮಟನಲ್ಲಿ ಅಂದಿನ ಪರಿಸ್ಥಿತಿಯ ಅಳಲನ್ನು ತೋಡಿಕೊಂಡಿದ್ದಾರೆ.

ಕವಿಯೊಬ್ಬನಿಗೆ ಶ್ರವಣಾನುಭವ ಆದಾಗ ಮೂಡಿ ಬರುವ ಕವಿತಾಕಲ್ಪನೆಗಳು ಹೇಗಿರುತ್ತವೆ? ಅದೇ ಅನುಭವ ದರ್ಶನಾನುಭವ, ಆದಾಗ ಹೇಗೆ ಇರುತ್ತದೆ, ಎಂಬುದನ್ನು ತಿಳಿಯಲು ಕುವೆಂಪು ಅವರ ೩ ಗೊಮ್ಮಟ ಗೀತೆಗಳು ಒಳ್ಳೆಯ ಸಾಮಗ್ರಿಯನ್ನು ಒದಗಿಸುತ್ತದೆ. ಗೊಮ್ಮಟನನ್ನೂ ಮಹಾಮಸ್ತಕಾಭಿಷೇಕವನ್ನು ಕಾಣದಿದ್ದಾಗ, ಕೇಳಿದ ಸಂಗತಿ ಮೇಲೆ ಬರೆದ 'ಗೊಮ್ಮಟೇಶ್ವರ' ಕವನದಲ್ಲಿ

ನಿನ್ನ ಪೂಜಿಪ ಭಕ್ತರೀಧರೆಯ ಬಡಜನಗಳಂ
ಬರದಿಂದ ಪೊರೆಯದೆಯೆ ಘೃತ ತೈಲವಾಹಿನಿಗಳಿಂ
ನಿನಗೆ ಜಳಕಂಗೈವುದಂ ಕಂಡು ಧರ್ಮಮುನಿನಂ
ಪರಿಹಾಸ್ಯ ಮಾಡಿ ನಸುನಗುತಲಿಹೆ ಗೋಮಟೇಶ!

ಎಂದು ಮಸ್ತಕಾಭಿಷೇಕದ ಬಗ್ಗೆ ಆಡಿದರು.

ಅದೇ ಮಸ್ತಕಾಭಿಷೇಕವನ್ನೂ, ಗೊಮ್ಮಟನನ್ನೂ ಕಂಡಾಗ ಬರೆದ ಪ್ರಗಾಢದಲ್ಲಿ ಹೇಳಿದ ಮಾತುಗಳಿವು.

'ಕೊಳೆತಳ್ತುದೆಮ್ಮ ಬಾಳ್ಗಿಂದಾಗುತಿದೆ ಮಹಾ

ದೊಲ್ ಮಸ್ತಕಾಭಿಷೇಕಂ

ಜ್ಞಾನ ಮೇಣ್ ಭಕ್ತಿ ಮೇಣ್ ವೈರಾಗ್ಯ

ಸಂಕೇತದಾ

ಅಮೃತ ಘತದಧ್ಯಾದಿ ಪುಣ್ಯಾಭಿಷೇಕಂ!

ಎಷ್ಟೇ ಆದರೂ ದರ್ಶನಾನುಭವದಲ್ಲಿ ಸಿಗುವ ಸತ್ಯ - ಸುಖ ಶ್ರವಣಾನುಭವದಲ್ಲಿ ಅದರ ಅಭಿವ್ಯಕ್ತಿಯಲ್ಲಿ ಸಿಗಲಾರದು. ಗೊಮ್ಮಟನನ್ನು ಕಾಣದೆ ಕೇಳಿದ ಸುಖದಲ್ಲಿ ಕವಿತೆ ಬರೆದಾಗ ಹತ್ತಾರು ಪ್ರಶ್ನೆಗಳ ಸುರಿಮಳೆಗೆರೆದು 'ನೀರ್ಭೀತಿಯಿಂದ ತೊಂಬತ್ತಾರು ಪಂಕ್ತಿಗಳಲ್ಲಿ ಗೊಮ್ಮಟನನ್ನು ಪರೋಕ್ಷವಾಗಿ ಮಾತನಾಡಿಸಿದವರು, ಅದೇ ಮೂರ್ತಿಯನ್ನು ಪ್ರತ್ಯಕ್ಷನಾಗಿ ಕಂಡಾಗ ಅವರಿಗೆ ಆದ ಅನುಭವ ಇದು.

"ಆರೊ ತೆಕ್ಕನೆ ತುಡುಕಿ ಬಾಯಿ ಮುಚ್ಚಿ
ಹಿಡಿದಂತೆ
ಮೌನ ಭಾರದಿ ಮಾತು ಮೂರ್ಛೆ ಹೋಗಿಹುದಿಲ್ಲಿ
ಶ್ರೀ ಗೊಮ್ಮಟೇಶ್ವರನ ಭವ್ಯ ಸನ್ನಿಧಿಯಲ್ಲಿ
ಗಾಂಭೀರ್ಯ ಗೌರವದ ಹೊನಲು ಚಿತ್ತವನೊತ್ತಿ॥

ಇನ್ನು ಮೂರ್ತಿಯನ್ನು ಕಂಡ ಕಾಲ್ಪನಿಕ ಅನುಭವ ದಲ್ಲಿ ಮೂಡಿಬಂದ ಮಾತು, ಕಣ್ಗೆ ಭೀಮಾಕಾರ ವಾಂತೊಡಂ ಮನಕೆ ನೀಂ ರಾಮನಂತಭಿರಾಮತರ ಮಾವಗಂ ಗೊಮ್ಮಟನ ಭೀಮ-ರಾಮ ದರ್ಶನವನ್ನು ಲೀಲಾಜಾಲವಾಗಿ ಭಾವಿಸಿದ್ದಾರೆ. ಅದೇ ಮೂರ್ತಿಯನ್ನು ಕಂಡ ವಾಸ್ತವಿಕ ಅನುಭವದಲ್ಲಿ ಹೊರ ಹೊಮ್ಮಿದ ನುಡಿಗಳಿವು. ಭವ್ಯತೆಯ ಭಾವದಾವೇಶದಿಂ, ರೋಮಾಂಚಕವಾಗುತಿಹುದೆನ್ನ ಮೈ! ಅಮೃತದಲ್ಲಿ ಮುಳುಗಿ ಮೃತವಾಗುತಿದೆ ನಾನೆಂಬ ವ್ಯಕ್ತಿ ಕ್ರಿಮಿ.

ಕುವೆಂಪು ಅವರ ಮನಸ್ಸಿನ ಮೇಲೆ ಗೊಮ್ಮಟ ಶಿಲ್ಪ ಗಾಢ ಪ್ರಭಾವ ಬೀರಿದೆ. ನಿನ್ನ ಸಿದ್ದಿಗೆ ಪಿರಿದದಾವುದೈ ಶಿಲ್ಪಸಿದ್ಧ? ನೀನೆ ಜೀವನ್ಮುಕ್ತ! ನಿನ್ನ ದೈಬ್ರಹ್ಮ ಯೋಗಂ ಎಂದಿದ್ದಾರೆ. 'ಶಿಲ್ಪ ಕೃತಿಯಿಂದ ಶಿಲ್ಪಿ, ಶಿಲ್ಪಿಯಿಂದ ಜಗತ್ತಿನ ಶಿಲ್ಪಿ - ಶಿಲ್ಪಿಸಿದ್ಧನ ಕಡೆಗೆ ದೃಷ್ಟಿ ಬೆಳೆದಿದೆ.' ಮೂರ್ತಿಯನ್ನು ಕವಿ ಹೃದಯದಿಂದ ಪ್ರತಿಭಾ ಚಕ್ಷುಗಳಿಂದ ಕಂಡ ಅವರು ಭಾವದಾವೇಶದಲಿ ಸಹೃದಯನಿಗೆ ಗೊಮ್ಮಟನ ಪರವಾಗಿ ಪ್ರಶ್ನೆಗಳ ಸವಾಲುಗಳ ಬಾಣಗಳನ್ನೇ ಎಸೆಯುತ್ತಾರೆ.

'ದೈತ್ಯಕಲೆಯಿದು; ದಿವ್ಯ ದೈತ್ಯ ಕಲೆ, ಕಲ್ಲಿನಲಿ
ನಿರ್ಜೀವ
ಜಡತೆಯಲಿ ನಗೆಗೆಡೆಯ ನಗ್ನತೆಗೆ ಇಂಥ
ಭೀಮಾಕೃತಿಗೆ
ಎದೆಯಿದ್ದರಿಲ್ಲಿ ನಗು ನೋಡುವಂ ಬತ್ತಲೆಗೆ
ಕಿಲ ಕಿಲನೆ
ನಗುವ ಓ ಲಘು ಹೃದಯ!' ಎನ್ನುತ್ತಾರೆ.

ಕುವೆಂಪು ಗೊಮ್ಮಟ ಶಿಲ್ಪದಲಿ ದೈತ್ಯಕಲೆ ಕಂಡಂತೆ ಇನ್ನೆರಡು ವಿಶೇಷಾಂಶಗಳನ್ನು ಅಪೂರ್ವರೀತಿಯಲ್ಲಿ ಕಂಡಿದ್ದಾರೆ. ಒಂದು ಮೌನದ ಬಗ್ಗೆ, ಮತ್ತೊಂದು ನಗ್ನತೆ ಬಗ್ಗೆ. ಗೊಮ್ಮಟನ ನಗ್ನತೆ ಅವರಿಗೆ ಅರಿವಾದ ಪರಿ ಅಭೂತಪೂರ್ವವಾದುದು. ಅವರು ನಗ್ನತಾ ಮಿಮಾಂಸೆಯನ್ನು ಹೀಗೆ ಸಾರಿದ್ದಾರೆ. ಅಲ್ಪತಾ ಲವಲೇಶವಿಲ್ಲದೆಯೆ ಸರ್ವತ್ರ ಸರ್ವದರೊಳುಂ ಭೂಮನಾಗಿರುವ ಮಹಿತೋಮಹಿಮನಿಗೆ ಮುಚ್ಚು ಮರೆ ತಾನೇಕೆ? ಆದ್ದರಿಂದಲೇ ಗೊಮ್ಮಟಾ 'ನಗ್ನತೆಗೆ ನಾಚದಿಹೆ ಬತ್ತಲೆಗೆ ಬೆದರದಿಹೆ' ಆದರೆ ನಿನ್ನಂತೆ ಇರಲು ಉಳಿದವರು ಬಯಸಿದರೆ ಅವರು 'ಬೋಳ್, ಕಾವಿ, ರುದ್ರಾಕ್ಷಿ, ವೈರಮುಡಿ, ಜರಿಯಮುಡಿ, ಕತ್ತಲೆಯ ಗರ್ಭಗುಡಿ ಮೊದಲಾದುವೆಲ್ಲವಂ ತೊರೆದು, ಸತ್ಯದ ದಿಗಂಬರತೆಯೊಂದನೆ ಒಲಿದು ನಿನ್ನ ದಿವ್ಯ ನಿರ್ಲಕ್ಷ್ಯತಾ ಸ್ಥಿರತೆಯನ್ನು ಭೂಮತೆಯ, ಭವ್ಯತೆಯ ಬ್ರಹ್ಮ ಗಾಂಭೀರ್ಯಮಂ' ಪಡೆಯಬೇಕಾಗುತ್ತದೆ. ಅದಕ್ಕಾಗಿ ಕವಿ ನನಗೆ ಅವುಗಳನ್ನೆಲ್ಲಾ ಅನುಗ್ರಹಿಸು ಎಂದು ಪ್ರಾರ್ಥಿಸಿದ್ದಾರೆ.

ಮೌನವನ್ನು ಗೊಮ್ಮಟನಲ್ಲಿ ಅಸದೃಶ ರೀತಿಯಲ್ಲಿ ಕುವೆಂಪು ಕಂಡಿದ್ದಾರೆ. ಮೌನ ಸ್ಥೈರಣೆಯ ಲಕ್ಷಣವಾಗಿದೆ. ಆದ್ದರಿಂದಲೇ ಗೂಢತರ ಮೌನದಿಂದೇಕಾಂಗಿಯಾಗಿ ನೀನಿಂತು ನಿಂತು ಶತಮಾನಗಳನೆಷ್ಟ ದಣಿವ ಕಾಣದೆ ಕಳೆದೆ? ಎಂದು ಕೇಳಿದ್ದಾರೆ. ಮೌನಕ್ಕೆ ಕಾರಣವನ್ನು ಮತ್ತೊಂದೆಡೆ ಅವರು ಹೀಗೆ ಊಹಿಸಿದ್ದಾರೆ.

"ವಾದಿಸುವ ಬಣವೇದ ಪಂಡಿತರ ನೋಡಿ ನೋಡಿ
ದರ್ಶನಗಳಾಚಾರ್ಯ ರಾಟೋಪವನುಂ ಕಂಡು ನೀಂ

ನಿರ್ವಾಣ ತಾನನಿರ್ವ ಚನೀಯವೆಂಬ ನಿಜಮಂ

ತಿಳಿಸಲೇಂ ಮೌನವ್ರತವಾಂತೆಯೋ" ಮೌನಿವರ್ಯ?

ಗೊಮ್ಮಟನ ಮೌನ ಕಂಡವರಿಗೂ ಪರಿಣಾಮಕಾರಿ ಕವಿ ಗೊಮ್ಮಟನನ್ನು ಕಂಡಾಗ ಆದ ಪರಿಣಾಮವೂ ಮೌನದ ಸ್ವರೂಪದ ಅನುಭವವೇ. 'ಆರೊ ತೆಕ್ಕನೆ ತುಡುಕಿ ಬಾಯ್ ಮುಚ್ಚಿ ಹಿಡಿದಂತೆ ಮೌನಭಾರದಿ ಮಾತು ಮೂರ್ಛೆ ಹೋಗಿಹುದಿಲ್ಲಿ' ಎಂಬ ಅನುಭವ ಅವರಿಗಾಗಿದೆ.

ಪೈ ಮುಕ್ತಿ ಕುವೆಂಪು ಅವರ ಮೂರು ಗೊಮ್ಮಟ ಗೀತೆಗಳು ಪ್ರಗಾಥಗಳ ಗುಂಪಿಗೆ ಸೇರಿದ್ದು ಮೇಲೆ ವಿಚಾರ ವಾಹಿನಿ ಒಳಗೆ ಭಾವದ ಪ್ರವಾಹ; ಭಾವಗೀತೆಯ ಪ್ರಕಾರಗಳಲ್ಲಿ ಅತ್ಯಂತ ವಿಚಾರಯುತವಾದುದು, ಪ್ರಜ್ಞಾಪೂರ್ವಕ ಕಲೆಗಾರಿಕೆಯ ಸಿದ್ಧಿಯುಳ್ಳದ್ದು ಪ್ರಗಾಥ ಎಂಬ ಮಾತಿಗೆ ನಿದರ್ಶನಗಳಾಗಿವೆ. ಈ ಪ್ರಗಾಥಗಳಲ್ಲಿನ ಗಾಂಭೀರ್ಯ ಘನತೆಗಳು ಮನಮುಟ್ಟುತ್ತಿವೆ.

ಗೊಮ್ಮಟನನ್ನು ಕುರಿತು ಪೈ ಮತ್ತು ಕುವೆಂಪು ಕವಿತೆಗಳು ಹಾಗೂ ಇತರರ ಕವಿತೆಗಳನ್ನು ಶಿಲ್ಪಕಲಾ ಕವಿತೆಗಳು ಎಂಬ ವರ್ಗಕ್ಕೆ ಅಥವಾ ಮೂರ್ತಿ ಶಿಲ್ಪ ಗೀತೆಗಳು ಎಂಬ ವರ್ಗಕ್ಕೆ ಸೇರಿಸುವುದು ಉಚಿತ. ಪ್ರಭುಶಂಕರ್ ಅವರು ವ್ಯಕ್ತಿ ಗೀತೆಗಳಿಗೆ ಸೇರಿಸಿದ್ದಾರೆ. ನಿಜವಾಗಿ ಇವುಗಳ ರಚನೆಯ ಮೂಲಸ್ಫೂರ್ತಿ ಶಿಲ್ಪವೇ ಆಗಿರುವುದರಿಂದ ವ್ಯಕ್ತಿತ್ವ ಚಿತ್ರಣ ಅನಿವಾರ್ಯವಾದರೂ, ಇವು ಮೂರ್ತಿ ಶಿಲ್ಪ ಗೀತೆಗಳನೆನ್ನುವುದೇ ಹೆಚ್ಚು ಸೂಕ್ತ. ಇದೇನೇ ಇರಲಿ, ಒಟ್ಟಿನಲ್ಲಿ ಪೈ ಮತ್ತು ಕುವೆಂಪು ಅವರು ಇಬ್ಬರೂ ರಾಷ್ಟ್ರಕವಿಗಳಾಗಿದ್ದು ಗೊಮ್ಮಟ ಶಿಲ್ಪ ಸೌಂದರ್ಯ, ಗೊಮ್ಮಟ ಜಿನದರ್ಶನ, ಜೈನಧರ್ಮದ ಹಿರಿಮೆ, ಪ್ರಗಾಥಗಳ ಸೊಗಸು ಇವುಗಳನ್ನು ಅಪೂರ್ವವಾಗಿ ಮೂಡಿಸಿದ್ದಾರೆ. ನಾಡಿನ ಶಿಲ್ಪಕಲಾ ತಾಣಗಳ ಬಗ್ಗೆ ಶಿಲ್ಪಕಲಾ ಕೃತಿಗಳ ಬಗ್ಗೆ ಕವಿತೆ ರಚನೆ ಮಾಡುವವರಿಗೆ

## ೬. ೪ - ಕರಾವಳಿಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ

ತುಳುನಾಡಿನ ಜೈನಧರ್ಮದ ಸ್ವರೂಪ, ವೈಲಕ್ಷಣ್ಯ, ಮತ್ತು ವೈಶಿಷ್ಟ್ಯಗಳನ್ನು ಗಮನಿಸಿದಾಗ, ಕ್ರಿ.ಶ. ನಸುಕಿನ ಕಾಲದಲ್ಲಿ ಇಲ್ಲಿಗೆ ಬಂದು ಹೆಜ್ಜೆಯೂರಿದ ಜೈನಧರ್ಮವು ಅಲ್ಪಕಾಲದಲ್ಲಿ ಮೊಳೆತು ಕುಡಿಯೊಡೆದು ಹಬ್ಬಿತು. ಮುಂದೆ ಹಂದರ, ಹಂದರವಾಗಿ ಮೈಚಾಚಿ ಬೆಳೆದು, ಎಲ್ಲಾ ಜನರಿಗೂ ತಂಪಿನ ಆಸರೆಯನ್ನು ನೀಡಿ ಸಾಂಸ್ಕೃತಿಕ ಸಮತೋಲನವನ್ನು ಸಾಧಿಸಿತು. ಸರ್ವಧರ್ಮ ಸಮನ್ವಯದೃಷ್ಟಿ ಭಾರತೀಯ ಸಂಸ್ಕೃತಿಯ ಜೀವಾಳ. ಈ ಜೀವವಾಹಿನಿ ಕರ್ನಾಟಕ ಸಂಸ್ಕೃತಿಯಲ್ಲಿ ಹರಿದು ಬಂದು, ತುಳುನಾಡಿನ ಸಂಸ್ಕೃತಿಯಲ್ಲೂ ಪಲ್ಲವಿಸಿತು. ಇದಕ್ಕೆ ಮುಖ್ಯ ಕಾರಣ ಈ ನಾಡಿನಲ್ಲಿ ಜೈನಧರ್ಮವು ವಹಿಸಿದ ಪ್ರಧಾನ ಪಾತ್ರ ಮತ್ತು ನೀಡಿದ ಅನನ್ಯವಾದ ಕೊಡುಗೆಗಳೆಂಬುದನ್ನು ಮರೆಯುವಂತಿಲ್ಲ. ತುಳುನಾಡಿನ ಒಂದೂವರೆ ಸಾವಿರ ವರ್ಷಗಳಷ್ಟು ಸುದೀರ್ಘವಾದ ಚರಿತ್ರೆಯ ಪುಟಗಳನ್ನು ತಿರುವಿ ಹಾಕಿದರೆ ಇದು ಸ್ಪಷ್ಟವಾಗುತ್ತದೆ.

೧. ತುಳುನಾಡಿನ ಮಟ್ಟಿಗೆ ರಾಜಧರ್ಮವೆಂದರೆ ಜೈನಧರ್ಮ. ಇದು ಸಂಕುಚಿತವಾದ ಏಕಾಂತ ದೃಷ್ಟಿಯನ್ನಿಟ್ಟುಕೊಳ್ಳದೆ, ವಿಶಾಲ ಮನೋಧರ್ಮವುಳ್ಳ ಮತ್ತು ತನ್ನ ಮೂಲ ಸಿದ್ಧಾಂತಕ್ಕೆ ಬದ್ಧವಾದ

ದೃಷ್ಟಿಯನ್ನಿಟ್ಟುಕೊಂಡಿದೆ. ಇದನ್ನು ತುಳುನಾಡಿನಲ್ಲಿ ಪ್ರಾಯೋಗಿಕವಾಗಿ ನಡೆದು ತೋರಿಸಿತು. ಇಲ್ಲಿಯ ಯಾವುದೇ ಧರ್ಮ, ಜಾತಿಗಳೊಡನೆ ಪೈಪೋಟಿಗಾಗಲೀ, ಘರ್ಷಣೆಗಾಗಲೀ, ಇಳಿಯದೇ, ಐಕ್ಯ - ಮೈತ್ರಿ - ವಿಶ್ವಾಸಗಳ ಮೂಲಕವಾಗಿ ಜನರ ಮನಸ್ಸನ್ನು ಗೆದ್ದುಕೊಳ್ಳುವಲ್ಲಿ ಇದು ಸಹಕಾರಿಯಾಯಿತು. ಹೀಗಾಗಿ ಇಲ್ಲಿಯ ಶೈವ, ವೈಷ್ಣವ, ಧರ್ಮಗಳೊಡನೆ ಮುಕ್ತವಾಗಿ ಕಲೆತು ಉನ್ನತಸ್ತರದಲ್ಲಿ ಹೊಂದಾಣಿಕೆಯನ್ನು ಮಾಡಿಕೊಂಡಿತು. ಇಲ್ಲಿಯ ಅನೇಕ ಜಾನಪದೀಯ ನಂಬಿಕೆಗಳನ್ನು ಪುರಸ್ಕರಿಸಿದ ಜೈನಧರ್ಮವು, ಭೂತಾರಾಧನೆಯನ್ನು ಕೂಡ ಸಮ್ಯಕ್ತ್ವಕ್ಕೆ ವಿರೋಧವಾದ ಮಿಥ್ಯಾದೃಷ್ಟಿಯೆಂದು ಅಲ್ಲಗಳೆಯದೆ ತೀರ್ಥಂಕರ ಭಕ್ತಿಯ ಜೊತೆಜೊತೆಗೆ ಸಮಾನವಾಗಿ ಸ್ವೀಕರಿಸಿತು. ಇದು ತುಳುನಾಡಿನಲ್ಲಿ ಜೈನಧರ್ಮವು ಸಾಧಿಸಿದ ಉತ್ತಮ ಸಾಧನೆಯೆನ್ನಬಹುದು. ಏಕೆಂದರೆ ಕರ್ನಾಟಕದ ಇತರ ಭಾಗಗಳಲ್ಲಿ ಜೈನಧರ್ಮದ ವಿನಾಶಕ್ಕೆ ಕಾರಣವಾದ ಈ ಅಂಶಗಳು ತುಳುನಾಡಿನಲ್ಲಿ ಯಾವ ಪರಿಣಾಮವನ್ನೂ ಬೀರಲಿಲ್ಲ.

೨. ಜೈನಮತೀಯರ ಅರಮನೆಗಳು, ಬೀಡುಗಳು, ಅವುಗಳ ಮಟ್ಟದಲ್ಲಿ ಅಧಿಕಾರ ಗ್ರಹಣ ಮಾಡುವ ಮತ್ತು ಸಾಂಪ್ರದಾಯಿಕವಾಗಿ ನಡೆದು ಬಂದಿರುವ ಪಟ್ಟಾಭಿಷೇಕ ಕಾರ್ಯಕ್ರಮಗಳು ಇಂದಿಗೂ ತುಳುನಾಡಿನಲ್ಲಿ ಜೀವಂತವಾಗಿದೆ. ಮುಲ್ಕಿ ಅರಸರು, ಅಳದಂಗಡಿ ಅಜಿಲರು, ಪಡುಬಿದಿರೆ, ಕೂಳೂರು, ಧರ್ಮಸ್ಥಳ ಬೀಡುಗಳ ಅಧಿಕಾರಿಗಳನ್ನು ಇಲ್ಲಿ ಹೆಸರಿಸಬಹುದು. ಇದೊಂದು ಸಾಂಸ್ಕೃತಿಕವಾಗಿ ಮಹತ್ವದ ಕಲಾಪವಾಗಿದ್ದು, ಆ ಮನೆತನದ ಅಧಿಕಾರವನ್ನು ಪಟ್ಟಾಭಿಷೇಕದ ಮೂಲಕ ಸ್ವೀಕರಿಸುವ ಪದ್ಧತಿಯು ಉನ್ನತ ಮೌಲ್ಯಕ್ಕೆ ಹಿಡಿದ ನಿದರ್ಶನವಾಗಿದೆ. ಅಂದರೆ ಅಧಿಕಾರ ಗ್ರಹಣ ಮಾಡಿದ ವ್ಯಕ್ತಿಯು ತನ್ನ ಕೌಟುಂಬಿಕ ಸಂಬಂಧವನ್ನು ಕಳಚಿಕೊಂಡು, ಅಲ್ಲಿಯ ಜನಾಂಗದ ಪ್ರತಿನಿಧಿಯಾಗುತ್ತಾನೆ. ಆ ಊರಿನ ದೇವಾಲಯದ, ಭೂತಾಲಯದ ಪ್ರತಿನಿಧಿಯಾಗಿಯೂ ಮಾನ್ಯನಾಗುತ್ತಾನೆ. ಹೀಗೆ ವ್ಯಕ್ತಿ ಸಂಬಂಧವನ್ನು ಕಳಚಿಕೊಂಡು, ತನ್ನ ಸುತ್ತಲಿನ ಸಮಾಜದ ಧ್ವನಿಯಾಗುವ ಮತ್ತು ಅಗೋಚರ ಜಗತ್ತಿನ ದೇವರು - ದೈವಗಳ ಮುಖವಾಣಿಯಾಗುವ ಈ ಪ್ರಕ್ರಿಯೆಯು ತುಳುನಾಡಿನ ವಿಶಿಷ್ಟವಾದ ಆಚರಣೆ. ಇಂಥ ವ್ಯಕ್ತಿಯೋರ್ವನು ಮೃತನಾದಾಗ ಶವಸಂಸ್ಕಾರದಿಂದ ಮೊದಲ್ಗೊಂಡು ಸೂತಕಗಳೆಲ್ಲವೂ ಆತನ ಕೈಕೆಳಗಿನ ಅಧಿಕಾರೀ ವರ್ಗದವರಿಗೆ ಮೀಸಲು. ಕುಟುಂಬ ವರ್ಗಕ್ಕೆ ಸೂತಕವಿಲ್ಲ.

೩. ತುಳುನಾಡಿನಲ್ಲಿ ಜೈನಧರ್ಮವು ಸಾಧಿಸಿ ತೋರಿದ ಸರ್ವಧರ್ಮ ಸಮನ್ವಯ ದೃಷ್ಟಿ ಬಹುಮುಖ್ಯವಾದುದು. ಬಸದಿ, ದೇವಾಲಯ, ಭೂತಾಲಯಗಳ ನಿರ್ವಹಣೆಯಲ್ಲಿ ಈ ಅಂಶವು ಎದ್ದು ಕಾಣುತ್ತದೆ. ಉದಾಹರಣೆಗೆ ಧರ್ಮಸ್ಥಳ ಕ್ಷೇತ್ರವನ್ನೇ ತೆಗೆದುಕೊಂಡರೆ, ಇಲ್ಲಿಯ ಅಧಿಕಾರಿಗಳು ಜೈನಮತೀಯರಾದ ಹೆಗ್ಗಡೆಯವರು. ಚಂದ್ರನಾಥ ತೀರ್ಥಂಕರ ಕುಲದೈವ; ಮಂಜುನಾಥ ಸ್ವಾಮಿ ಅಥವಾ ಶಿವ, ಆರಾಧ್ಯದೈವ, ಧರ್ಮದೇವತೆಗಳಾದ ಕಾಳರಾಹು, ಕಾಳರ್ಕಾಯಿ, ಕನ್ಯಾಕುಮಾರಿ, ಅಣ್ಣಪ್ಪ, ಪಂಜುರ್ಲಿ ಇತರ ದೈವಗಳು. ಮಂಜುನಾಥನ ಅರ್ಚಕರು ವೈಷ್ಣವರು. ಇಂಥ ಉದಾಹರಣೆ ಬೇರೆ ಎಲ್ಲಿಯೂ ಕಂಡುಬರುವುದಿಲ್ಲ. ಇದು ಕೇವಲ ಧರ್ಮಸ್ಥಳದಲ್ಲಿ ಮಾತ್ರವಲ್ಲ, ತುಳುನಾಡಿನಲ್ಲಿರುವ ಎಲ್ಲಾ ಜೈನಮತೀಯರ ಅರಮನೆ, ಬೀಡು, ಗುತ್ತುಗಳಲ್ಲಿ ಇಂಥ ಸಮನ್ವಯದ ಆರಾಧನಾ ಕ್ರಮಗಳು ಇಂದಿಗೂ ರೂಢಿಯಲ್ಲಿವೆ.

೪. ಧಾರ್ಮಿಕ ಆಚರಣೆಗಳಲ್ಲಿ ರಥೋತ್ಸವ, ಪಂಚಕಲ್ಯಾಣ ಮತ್ತು ಮಹಾಮಸ್ತಕಾಭಿಷೇಕ, ನೋಂಪಿವ್ರತ,

ಇತರ ತಾಂತ್ರಿಕ ಆರಾಧನೆಗಳು ಇಲ್ಲಿ ಪ್ರಮುಖವಾಗಿದೆ. ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ಕಂಬಳ ಕ್ರೀಡೆಯು ಜೈನ ಅರಸರಿಂದ ವಿಶೇಷ ಪ್ರೋತ್ಸಾಹವನ್ನು ಪಡೆದುಕೊಂಡಿದೆ.

೫. ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ತ್ಯಾಗ, ತಪಸ್ಸು, ಬಲಿದಾನ, ವ್ರತ ಮುಂತಾದವುಗಳಲ್ಲಿ ತೊಡಗಿಸಿಕೊಂಡ ಜೈನಮತೀಯರ ಸ್ಮಾರಕಗಳು ಇಲ್ಲಿ ಹೆಚ್ಚು ಸಂಖ್ಯೆಗಳಲ್ಲಿ ಕಂಡುಬರುತ್ತವೆ. ದಾನಶಾಸನಗಳು, ವೀರಗಲ್ಲು, ನಿಸಧಿಗಲ್ಲುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಸತಿಸಹಗಮನದ ಉದಾಹರಣೆಗಳು ಕರ್ನಾಟಕದ ಇತರ ಭಾಗಗಳಲ್ಲಿ ಕಂಡುಬರುತ್ತವೆಯಾದರೂ ಜೈನ ಮಹಿಳೆಯರು ಸಹಗಮನ ನಡೆಸಿದ ಉದಾರಹಣೆಗಳು ತುಳುನಾಡಿನಲ್ಲಿ ಕಂಡು ಬರುವುದಿಲ್ಲ.

೬. ರಾಜನು ಆಡಳಿತ ವ್ಯವಸ್ಥೆಯ ಕೇಂದ್ರ ಬಿಂದು. ದುಷ್ಟನಿಗ್ರಹ ಶಿಷ್ಟ ಪರಿಪಾಲನೆ ಆತನ ಆದರ್ಶವಾಗಿದ್ದರೂ, ಇಲ್ಲಿಯ ಅರಸರು ಪ್ರಜೆಗಳ ರಕ್ಷಣೆ, ಧಾರ್ಮಿಕ ಕೇಂದ್ರಗಳ ರಕ್ಷಣೆ, ಮಠಮಾನ್ಯಗಳ ಉಸ್ತುವಾರಿ, ರಾಜ್ಯದ ಸೀಮಾರಕ್ಷಣೆ, ಸ್ವತಂತ್ರ ಗ್ರಾಮಾಡಳಿತ, ವಾದ-ವಿವಾದ, ನ್ಯಾಯ ತೀರ್ಮಾನ, ಶಾಂತಿ ಪಾಲನೆ, ಕಾನೂನು ಮೀರಿದವರಿಗೆ ಶಿಕ್ಷೆ, ಎಲ್ಲಕ್ಕಿಂತಲೂ ಮುಖ್ಯವಾಗಿ ಜೈನಧರ್ಮದಲ್ಲಿ ಪ್ರತಿಪಾದಿತವಾದ ಚತುರ್ವಿಧದಾನಗಳಾದ ಆಹಾರ - ಅಭಯ - ವಿದ್ಯಾ - ಔಷಧ ದಾನಗಳ ಮೂಲಕ ತಮ್ಮ ಕರ್ತವ್ಯಪಾಲನೆ ಮಾಡಿರುವುದು ಮಹತ್ವದ ಅಂಶವಾಗಿದೆ.

೭. ಕೊಡುಕೊಳ್ಳುವಿಕೆ ಜೀವಂತ ಸಂಸ್ಕೃತಿಯ ಲಕ್ಷಣ. ಇಲ್ಲಿಯ ಜೈನ ಧರ್ಮವು ತನ್ನ ಹಲವಾರು. ಮೌಲ್ಯಗಳನ್ನು ತುಳುನಾಡಿಗೆ ನೀಡಿರುವಂತೆ, ಇಲ್ಲಿಯ ಅನೇಕ ಉತ್ತಮಾಂಶಗಳನ್ನು ತಾನು ಸ್ವೀಕರಿಸಿದೆ. ಧಾರ್ಮಿಕ, ಸಾಮಾಜಿಕ, ಕಲೆ, ಸಾಹಿತ್ಯ, ಶಿಲ್ಪ ಮೊದಲಾದ ಸಾಂಸ್ಕೃತಿಕ ವಿಷಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಮನದಟ್ಟಾಗುತ್ತದೆ. ಉದಾಹರಣೆಗೆ ಭೂತಾರಾಧನೆಯನ್ನೇ ತೆಗೆದುಕೊಳ್ಳಬಹುದು. ಇದು ಮೂಲತಃ ಆಸುರೀಕ್ರಿಯೆ. ಹಿಂಸೆ, ರಕ್ತಪಾತ, ಪ್ರಾಣಿಬಲಿ ಇಲ್ಲಿ ಅನಿವಾರ್ಯ. ಆದರೆ ಇಂದು ಎಷ್ಟೋ ಕಡೆಗಳಲ್ಲಿ ಹಿಂಸೆ, ಬಲಿ ಪದ್ಧತಿ ನಿಂತಿವೆ. ಸಾತ್ವಿಕ ಆಹಾರದ ಮೂಲಕ ಭೂತಾರಾಧನೆ ನಡೆಯುತ್ತಿವೆ. ಜೈನಮತದ ಅಹಿಂಸಾತತ್ವವೇ ಇದಕ್ಕೆ ಕಾರಣ. ಇದನ್ನು ಇಲ್ಲಿಯ ಅರಸರು ರಾಜಶಾಸನದ ಮೂಲಕ ನಿಷೇಧಿಸದೆ ಮನಪರಿವರ್ತನೆ, ತಿಳಿವಳಿಕೆ, ನೀತಿಕಥೆ, ಸಾಹಿತ್ಯದ ಮೂಲಕ ಸಂಘಟಿಸಿ ಪರಿಣಾಮಕಾರಿಯಾಗಿ ನಿಯಂತ್ರಿಸಿರುವುದು ಕಂಡುಬರುತ್ತದೆ.

೮. ತುಳುನಾಡಿನಲ್ಲಿ ಬಸದಿಗಳ ನಿರ್ಮಾಣ ಬಹುದೊಡ್ಡ ದಾಖಲೆಯಾಗಿರುವಂತೆ, ಜೈನೇತರ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಗೊಳ್ಳಲು ಜೈನ ಅರಸರ ಪ್ರೋತ್ಸಾಹವೇ ಮುಖ್ಯ ಕಾರಣವಾಗಿದೆ. ಅವುಗಳಿಗೆ ದಾನ, ದತ್ತಿಗಳನ್ನು ನೀಡಿ ಪೋಷಿಸಿಕೊಂಡು ಬಂದಿದ್ದಾರೆ. ಇಲ್ಲಿಯ ಅರಸರ ಸಾಮಾಜಿಕ ನೀತಿಗೆ ಕಾರ್ಕಳದ ಭೈರರಸರ ಕೊಡುಗೆಗಳನ್ನು ಉದಾಹರಿಸಬಹುದು. ಹಿರಿಯಂಗಡಿಯಲ್ಲಿರುವ ಅನೇಕ ಬಸದಿಗಳು, ಕಳಸದ ಕಲಸೇಶ್ವರ, ಕೆರೆವಸೆಯ ಮಹಾದೇವ, ಹೆರ್ಮುಂಡೆಯ ವಿಷ್ಣುಮೂರ್ತಿ ಮುಂತಾದ ದೇವಾಲಯಗಳು ಇವರ ಕೊಡುಗೆಗಳು. ಈ ವಂಶದ ಇಮ್ಮಡಿ ಭೈರವದೇವರಾಯನು ತನ್ನ ಅರಮನೆಯಲ್ಲಿ ಚಂದ್ರಪ್ರಭನನ್ನು ಪ್ರತಿಷ್ಠಾಪಿಸಿದ ತರುವಾಯ, ನಾರ್ವೆಯಲ್ಲಿ ಗೋಪಾಲಕೃಷ್ಣ, ಕೊಪ್ಪದಲ್ಲಿ ಚೈತ್ಯಾಲಯಗಳನ್ನು ನಿರ್ಮಿಸುತ್ತಾನೆ.

ಕಾರ್ಕಳದಲ್ಲಿ ತಾನು ಕಟ್ಟಿಸಿದ ಜೈನಬಸದಿಯನ್ನೇ ಗೋವಾದಿಂದ ಆಗಮಿಸಿದ ಗೌಡಸಾರಸ್ವತರಿಗೆ ಬಿಟ್ಟುಕೊಟ್ಟು ಅಲ್ಲಿ ಅನಂತ ಶಯನ ವಿಗ್ರಹ ಸ್ಥಾಪನೆಗೆ ಅವಕಾಶ ಮಾಡಿಕೊಡುತ್ತಾನೆ. ಹಾಗೆಯೇ ವೇಣೂರಿನ ಅಜಿಲರು ಬಳಂಜದ, ಪಂಚಲಿಂಗೇಶ್ವರ, ಅರ್ಧನಾರೀಶ್ವರ - ಸೋಮನಾಥ, ಮುಂತಾದ ದೇವಾಲಯಗಳನ್ನು ನಿರ್ಮಿಸಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಮತ ಸಾಮರಸ್ಯವನ್ನು ಮೆರೆದಿದ್ದಾರೆ.

೯. ಜೈನವಾಸ್ತುಶಿಲ್ಪವೆಂದರೆ ತುಳುನಾಡಿನ ವಾಸ್ತುಶಿಲ್ಪವೆನ್ನುವಷ್ಟರ ಮಟ್ಟಿಗೆ ಜೈನವಾಸ್ತು ಮತ್ತು ಮೂರ್ತಿ ಕಲೆಗಳು ಸಮೃದ್ಧವಾಗಿ ಬೆಳೆದುಬಂದಿವೆ. 180ಕ್ಕಿಂತಲೂ ಹೆಚ್ಚಿನ ಬಸದಿಗಳು ಸಾವಿರಾರು ವಿಗ್ರಹಗಳ ರಚನೆಗಳು ಜೈನಧರ್ಮದ ಔನ್ನತ್ಯವನ್ನು ಬಿಂಬಿಸುತ್ತವೆ. ಇವುಗಳಲ್ಲಿ ಚತುರ್ಮುಖ ಬಸದಿಗಳ ನಿರ್ಮಾಣ, ಚತುರ್ವಿಂಶತಿ ತೀರ್ಥಂಕರರ ಬಸದಿ ನಿರ್ಮಾಣ ತುಳುನಾಡಿನ ವಾಸ್ತುಕಲೆಯ ವೈಶಿಷ್ಟ್ಯಗಳು. ಬೃಹತ್‌ಗಾತ್ರದ ಬ್ರಹ್ಮಸ್ತಂಭಗಳ ನಿರ್ಮಾಣ, ಮಾನಸ್ತಂಭಗಳ ಕೆತ್ತನೆ, ಗೊಮ್ಮಟ ಶಿಲ್ಪಗಳ ಅಪೂರ್ವವಾದ ಕೆತ್ತನೆ - ಇವೆಲ್ಲವೂ ಭಾರತ ಮತ್ತು ವಿಶ್ವದ ಮಟ್ಟದಲ್ಲಿ ಗುರುತಿಸಲ್ಪಡುವ ಅತ್ಯುತ್ತಮ ಕಲಾಕೃತಿಗಳು. ಇದಕ್ಕಿಂತಲೂ ಮುಖ್ಯವಾಗಿ ಜೈನಪರಂಪರೆಯಲ್ಲಿ ಕಂಡರಿಯದ ಲೆಪ್ಪ(ಜೇಡಿ - ಮಣ್ಣು), ಜಿನಬಿಂಬ ನಿರ್ಮಾಣ ವಿಶ್ವಕಲಾ ಲೋಕಕ್ಕೆ ಮಹೋನ್ನತ ಕೊಡುಗೆಗಳು.

೧೦. ಕನ್ನಡ ಸಾಹಿತ್ಯದ ಹುಟ್ಟು ಜೈನಕವಿಗಳಿಂದ ಆರಂಭಗೊಂಡಿರುವಂತೆ ತುಳುನಾಡಿನಲ್ಲಿ ಸಾಹಿತ್ಯ ನಿರ್ಮಾಣ ಜೈನ ಕವಿಗಳಿಂದಲೇ ಆರಂಭವಾಯಿತು. ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಸಾಹಿತ್ಯ ಕಣ್ತೆರೆದದ್ದು ಜೈನ ಕವಿಗಳಿಂದ. ತುಳುನಾಡಿನಲ್ಲಿ ಪ್ರಾಕೃತ ಭಾಷೆಯು ಕೂಡ ಪ್ರಚಲಿತವಿತ್ತೆನ್ನುವುದಕ್ಕೆ ಒಬ್ಬನೇ ಪ್ರಾಕೃತ ಕವಿಯಾದ ಕಾರ್ಕಳದ ಯಶಃ ಕೀರ್ತಿಯ (ಕ್ರಿ.ಶ. ೧೪೪೩) ಎರಡು ಗ್ರಂಥಗಳು ಸಾಕ್ಷಿಯಾಗಿವೆ.

೧೧. ಕನ್ನಡ ಸಾಹಿತ್ಯದಲ್ಲಿ ಮಹಾಕವಿಯೆಂದು ಗುರುತಿಸಲ್ಪಟ್ಟ ರತ್ನಾಕರವರ್ಣಿಯ ಭರತೇಶ ವೈಭವವು ಕನ್ನಡ ಸಾಹಿತ್ಯಕ್ಕೆ ತುಳುನಾಡು ನೀಡಿದ ಮಹತ್ವದ ಕೊಡುಗೆ. ಜೈನ ಪರಂಪರೆಯಲ್ಲಿ ಬೆಳೆದುಬಂದಿದ್ದ ಚಂಪೂ ಮಾರ್ಗವನ್ನು ತ್ಯಜಿಸಿ, ಸಂಪೂರ್ಣವಾಗಿ ದೇಸಿಯತ್ತ ಒಲಿದಿರುವುದನ್ನು ತುಳುನಾಡಿನ ಜೈನಕವಿಗಳ ವೈಶಿಷ್ಟ್ಯವಾಗಿದೆ. ಸಾಂಗತ್ಯ, ಹಾಡು, ಸರಳ ರಗಳೆ, ಷಟ್ಪದಿ, ಕೀರ್ತನೆ, ಗದ್ಯ ರೂಪಗಳಲ್ಲಿ ಜೈನಕವಿಗಳು ತಮ್ಮ ಪುರಾಣ, ಶಾಸ್ತ್ರ, ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ.

ಹೀಗೆ ತುಳುನಾಡಿನಲ್ಲಿ ಜೈನಧರ್ಮವು ತನ್ನದೇ ಆದ ವಿನೂತನ ಮಾರ್ಗವೊಂದನ್ನು ನಿರ್ಮಿಸಿಕೊಂಡಿದೆ. ಸ್ಥಳೀಯ ಸಂಸ್ಕೃತಿಯ ಪ್ರವಾಹದ ಸೆಳೆತದಲ್ಲಿ ತನ್ನ ಅಸ್ತಿತ್ವವನ್ನುಳಿಸಿಕೊಂಡು ಮುನ್ನಡೆಯತ್ತ ಸಾಗಿದೆ. ಆಗಾಗ

ಏರಿಳಿತಗಳನ್ನನುಭವಿಸುತ್ತ ಸುತ್ತಲಿನ ವೈರುಧ್ಯಗಳ ನಡುವೆಯೂ ತನ್ನ ಕ್ರಿಯಾಶೀಲತೆಯನ್ನೂ ಸೃಜನಾತ್ಮಕತೆಯನ್ನೂ ಉಳಿಸಿ ಬೆಳೆಸಿಕೊಂಡು ಬಂದಿರುವುದು ಮಹತ್ವದ ವಿಷಯ. ತುಳು ಸಂಸ್ಕೃತಿಯ ಮೇಲೆ ಲಗ್ಗೆಯಿಟ್ಟ ವಸಾಹತು ಸಂಸ್ಕೃತಿಯ ಹಾದಿಯನ್ನು ತುಳಿಯದೆ, ತುಳು ಸಂಸ್ಕೃತಿಯ ಕೈಹಿಡಿದು ನಡೆಯುತ್ತ ಜನಪರವಾಗಿ ಮತ್ತು ಮಾನವೀಯವಾಗಿ ನಡೆದು ತೋರಿತು.

ತಾನೂ ಬೆಳೆದು ಅನ್ಯ ಸಂಸ್ಕೃತಿಯ ಬೆಳವಣಿಗೆಗೂ ನೆರವಾಯಿತು. ಸರ್ವಧರ್ಮ ಸಹಿಷ್ಣುತೆ, ಪರಸ್ಪರ ಸೌಹಾರ್ದ, ಪ್ರೀತಿ, ವಿಶ್ವಾಸಗಳ ಆಲಿಂಗನದ ಮೂಲಕ ತುಳು ಜನಾಂಗದ ಹೃದಯವನ್ನು ಕೊಳ್ಳೆ ಹೊಡೆದು ಗೆದ್ದಿರುವುದು ಸಣ್ಣ ವಿಷಯವೇನಲ್ಲ. ತುಳು ಸಮಾಜದಲ್ಲಿ ಇಂದಿಗೂ ಪ್ರತಿಷ್ಠೆಯ ಮತ್ತು ಗೌರವದ ಸ್ಥಾನವನ್ನು ಪಡೆದುಕೊಂಡಿದೆ. ಇಂದು ಸಂಖ್ಯಾ ದೃಷ್ಟಿಯಿಂದ ಜೈನಧರ್ಮವು, ತುಳುನಾಡಿನಲ್ಲಿ ಕ್ಷೀಣಿಸಿದೆಯೆಂದು ತೋರಿದರೂ, ಸಾಂಸ್ಕೃತಿಕವಾಗಿ ಜೈನ ಪ್ರಭಾವವು ಕುಂದಿಲ್ಲ. ಅದಕ್ಕೆ ಉನ್ನತವಾದ ಸ್ಥಾನ, ಘನತೆಗಳು ಇದ್ದೇ ಇದೆ. ಇದು ತುಳುನಾಡಿನಲ್ಲಿ ಜೈನಧರ್ಮವು ಸಾಧಿಸಿದ ಹೆಗ್ಗಳಿಕೆಯನ್ನಬಹುದು.

# ಉಪಸಂಹಾರ

ಇಲ್ಲಿಯವರೆಗಿನ ವಿವೇಚನೆಯಲ್ಲಿ ತುಳುವಾಡಿನ ಬಾಹುಬಲಿಯ ಸ್ವರೂಪ, ವೈಲಕ್ಷಣ್ಯ, ಮತ್ತು ವೈಶಿಷ್ಟ್ಯಗಳನ್ನು ಸಾಧಾರಣವಾಗಿ ನಿರೂಪಿಸಲಾಯಿತು. ತುಳುನಾಡಿನ ಒಟ್ಟು ಸಾಂಸ್ಕೃತಿಕ ರಂಗಕ್ಕೆ ಈ ಧರ್ಮವು ನೀಡಿದ ಕೊಡುಗೆ ಅಪಾರ. ಕ್ರಿ.ಶ. ನಸುಕಿನ ಕಾಲದಲ್ಲಿ ಇಲ್ಲಿಗೆ ಬಂದು ಹೆಜ್ಜೆಯೂರಿದ ಜೈನಧರ್ಮವು ಅಲ್ಪಕಾಲದಲ್ಲಿ ಮೊಳೆತು ಕುಡಿಯೊಡೆದು ಹಬ್ಬಿ ಮುಂದೆ ಹಂದರ ಹಂದರವಾಗಿ ಮೈಚಾಚಿ ಬೆಳೆದು, ಸಾಂಸ್ಕೃತಿಕ ಸಮತೋಲನವನ್ನು ಸಾಧಿಸಿತು. ಸರ್ವಧರ್ಮ ಸಮನ್ವಯದೃಷ್ಟಿ ಭಾರತೀಯ ಸಂಸ್ಕೃತಿಯ ಜೀವಾಳ. ಈ ಜೀವವಾಹಿನಿ ಕರ್ನಾಟಕ ಸಂಸ್ಕೃತಿಯಲ್ಲಿ ಹರಿದು ಬಂದು, ಕರಾವಳಿಯ ಸಂಸ್ಕೃತಿಯಲ್ಲೂ ಪಲ್ಲವಿಸಿತು. ತುಳುನಾಡಿನಲ್ಲಿ ಸುದೀರ್ಘವಾದ ಇತಿಹಾಸದಲ್ಲಿ ಜೈನಧರ್ಮದ ಸ್ಪಷ್ಟ ಹೆಜ್ಜೆ ಗುರುತನ್ನು ಇಲ್ಲಿಯ ಗೊಮ್ಮಟನ ಮೂರ್ತಿಗಳು ರುಜುವಾತು ಪಡಿಸುತ್ತವೆ.

ಕಾರ್ಕಳದಲ್ಲಿ ಗೊಮ್ಮಟನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ ಭೈರರಸು - ವೀರಪಾಂಡ್ಯನ (ಕ್ರಿ.ಶ. ೧೪೩೧) ಚರಿತ್ರೆಯನ್ನೂ ಅನಂತರ ಕಾವ್ಯದ ಕೊನೆಯ ಭಾಗದಲ್ಲಿ ತನ್ನ ಆಶ್ರಯದಾತನಾದ ಇಮ್ಮಡಿ ಭೈರವರಾಯನು ಕ್ರಿ.ಶ. ೧೬೪೬ರಲ್ಲಿ ಅದೇ ಗೊಮ್ಮಟೇಶ್ವರನ ಪುನರ್ ಪ್ರತಿಷ್ಠೆಯನ್ನು ನಡೆಸಿ ಮಹಾಮಸ್ತಕಾಭಿಷೇಕವನ್ನು ವೈಭವದಿಂದ ನಡೆಸಿದ ಚಾರಿತ್ರಿಕ ಘಟನೆಯನ್ನೂ ಚದುರ ಚಂದ್ರಮನು ತನ್ನ ಕಾವ್ಯದಲ್ಲಿ ದಾಖಲಿಸಿದ್ದಾನೆ.[೧೦] ಹೀಗಾಗಿ ಈ ಕೃತಿಗೆ ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ. ಕವಿಯ ಕಾಲವನ್ನು ಕೂಡ ಕ್ರಿ.ಶ. ೧೬೪೬ ಎಂದು ನಾವು ಭಾವಿಸಬಹುದು. ಚದುರ ಚಂದ್ರಮನ ಗೊಮ್ಮಟೇಶ್ವರ ಚರಿತ್ರೆಯ ಗ್ರಂಥಕ್ಕೆ ಪಂಪನ 'ಆದಿಪುರಾಣ', ಜಿನಸೇನರ 'ಪೂರ್ವ ಪುರಾಣ' ಕೃತಿಗಳು ಆಕರಗಳಾಗಿವೆ. ಕಾವ್ಯ ರಚನೆಯ ಸಂದರ್ಭದಲ್ಲಿ ಕವಿಯ ಮೇಲೆ ಪಂಪನ ಪ್ರಭಾವ ತೀವ್ರವಾಗಿರುವುದು ಕಂಡುಬರುತ್ತದೆ. ಪಂಪನ ಪದ್ಯ, ವಾಕ್ಯಗಳನ್ನು ಅಲ್ಪ-ಸ್ವಲ್ಪ ಬದಲಾವಣೆಗಳೊಡನೆ ಬಳಸಿಕೊಂಡಿದ್ದಾನೆ. ಉದಾಹರಣೆಗೆ ಪಂಪನ ಜಗತ್‌ಪ್ರಸಿದ್ಧ 'ನೆಲೆಸುಗೆ ನಿನ್ನ ವಕ್ಷದೊಳ್' ಎಂಬ ಪದ್ಯವು ಚಂದ್ರಮನ ಕೈಯಲ್ಲಿ 'ನಿನ್ನ ವಕ್ಷಸ್ಥಳದೊಳು ಭಾಗ್ಯಲಕ್ಷ್ಮಿ ತಾ ನಿನ್ನ ಸುಸ್ಥಿರವಾಗಿ ನಿಲಲಿ - ಎಂದು ಪರಿವರ್ತನೆಗೊಂಡಿದೆ. ಇಂಥ ಹಲವಾರು ದೃಷ್ಟಾಂತಗಳನ್ನು ನಾವು ಕಾಣಬಹುದು. ಪಂಪನು ಹೃಸ್ವಗೊಳಿಸಿದ ಕಥೆಯನ್ನು ಚಂದ್ರಮನೂ ಹೃಸ್ವಗೊಳಿಸಿದ್ದಾನೆ. ಪಂಪನು ಕೈಬಿಟ್ಟ ಕಾವ್ಯ ಭಾಗಗಳನ್ನು ಚಂದ್ರಮನು ಜಿನಸೇನರ ಪೂರ್ವ ಪುರಾಣದಿಂದ ಎತ್ತಿಕೊಂಡಿದ್ದಾನೆ.[೮]

ಪ್ರಾಕೃತ ಭಾಷೆಯಲ್ಲಿ ರಚನೆಗೊಂಡಿರುವ ವಿಮಲ ಸೂರಿಯ (ಕ್ರಿ.ಶ. ೧ನೇ ಶತಮಾನ) ಪಉಮಚರಿಯಂ, ಆದಿನಾಹಚರಿಯಂ, ವೃಷಭದೇವ ಚರಿಯಂ, ಶೀಲಾಂಕಾಚಾರ್ಯನ (ಕ್ರಿ.ಶ. ೮೭೦) ಚಉಪ್ಪನ್ನಮಹಾಪುರಿಸ ಚರಿಯಂ, ವಸುದೇವ ಹಿಂಡಿಯ (ಕ್ರಿ.ಶ. ಸು. ೪ನೇ ಶತಮಾನ) ಪುಉಮಚರಿಯಂ ಮುಂತಾದ ಕೃತಿಗಳ ಜೊತೆಗೆ ಜಂಬೂದಿದ ಪಣ್ಣತ್ತಿ, ಕಲ್ಪಸೂತ್ರ, ಮುಂತಾದ ಕೃತಿಗಳಲ್ಲಿ ಬಾಹುಬಲಿಯ ಕಥೆಯು ಅಡಕವಾಗಿರುವುದನ್ನು ಗುರುತಿಸಬಹುದು. ಸಂಸ್ಕೃತ ಭಾಷೆಯ ಕೃತಿಗಳಲ್ಲಿ ರವಿಶೇಷಣ (ಕ್ರಿ.ಶ. ೬೭೬) ಪದ್ಮ ಪುರಾಣ, ಪುನ್ನಾಟಸಂಘದ ಜಿನಸೇನಾಚಾರ್ಯರ (ಕ್ರಿ.ಶ. ೮ನೇ ಶತಮಾನ), ಹರಿವಂಶ ಪುರಾಣ, ಸೇನ ಸಂಘದ ಜಿನಸೇನಾಚಾರ್ಯರ (ಕ್ರಿ.ಶ.೯ನೇ ಶತಮಾನ) ಪೂರ್ವಪುರಾಣ,

ಪುಷ್ಪದಂತನ (ಕ್ರಿ.ಶ. ೯೬೫) ಮುಂತಾದ ಕೃತಿಗಳು ಭರತ-ಬಾಹುಬಲಿಯರ ಕಥೆಯನ್ನು ನಿರೂಪಿಸುತ್ತದೆ. ಕನ್ನಡ ಭಾಷೆಯ ಕೃತಿಗಳಲ್ಲಿ ಪಂಪನ (ಕ್ರಿ.ಶ. ೯೪೨) ಆದಿಪುರಾಣವೇ ಪ್ರಾಚೀನ ಕೃತಿ. ಅನಂತರ ಬಂದಿರುವ ಚಾಮುಂಡರಾಯನ (ಕ್ರಿ.ಶ. ೯೭೮) ತ್ರಿಷಷ್ಟಿಶಲಾಕಾ ಪುರುಷ ಮಹಾಪುರಾಣ, ಬೊಪ್ಪಣ್ಣ ಪಂಡಿತನ (೧೧೮೦) ಗೊಮ್ಮಟಸ್ತುತಿ, ಹಸ್ತಿಮಲ್ಲನ (ಕ್ರಿ.ಶ. ೧೨೯೦) ಪೂರ್ವಪುರಾಣ ಗ್ರಂಥಗಳನ್ನು ಇಲ್ಲಿ ಉಲ್ಲೇಖಿಸಬಹುದು. ಅಂತೆಯೇ ನಾಗಾರ್ಜುನನ (ಕ್ರಿ.ಶ. ೧೩೩೧) ಪುಣ್ಯಾಸ್ರವ, ಕೇಶವವರ್ಣಿಯ (ಕ್ರಿ.ಶ. ೧೩೫೯) ಬಾಹುಬಲಿ ಚರಿತೆ, ಕಲ್ಯಾಣ ಕೀರ್ತಿಯ (ಕ್ರಿ.ಶ. ೧೪೦೦), ಕಾಮನ ಕಥೆ, ರತ್ನಾಕರವರ್ಣಿಯ (ಕ್ರಿ.ಶ. ೧೫೫೭) ಭರತೇಶ ವೈಭವ ಕೃತಿಗಳನ್ನು ನಾವು ಮರೆಯುವಂತಿಲ್ಲ. ಅನಂತರದ ಕಾಲದಲ್ಲೂ ಈ ಪರಂಪರೆ ಮುಂದುವರಿದುಕೊಂಡು ಬಂದು ಚಿಕ್ಕಣ್ಣ ಪಂಡಿತ (ಕ್ರಿ.ಶ. ೧೫ನೇ ಶತಮಾನ) ಶಾಂತಣ ವರ್ಣಿ (ಕ್ರಿ.ಶ. ೧೬೧೨) ಪದ್ಮರಸ (ಕ್ರಿ.ಶ. ೧೬೧೩) ಚದುರಚಂದ್ರಮ (ಕ್ರಿ.ಶ. ೧೬೪೬) ಶಾಂತಕೀರ್ತಿ (ಕ್ರಿ.ಶ. ೧೭೬೮) ಅನಂತಕವಿ (ಕ್ರಿ.ಶ. ೧೭೮೦) ಮುಂತಾದವರು ಭರತ ಬಾಹುಬಲಿಯರ ಕಥೆಯನ್ನಾಯ್ದುಕೊಂಡು ಕಾವ್ಯ ರಚಿಸಿರುವುದರ ಜೊತೆಗೆ ಗೊಮ್ಮಟೇಶ ಶಿಲ್ಪ ನಿರ್ಮಾಣದ ಕುರಿತು ಗ್ರಂಥ ರಚಿಸಿರುವುದು ಜನರಿಗೆ ಬಾಹುಬಲಿಯ ಕುರಿತು ಇರುವ ಅಪಾರ ಗೌರವಾದರಗಳಿಗೆ ಸಾಕ್ಷಿಯಾಗಿದೆ.[೮]

ವೇಣೂರಿನ ಗೊಮ್ಮಟ ಮೂರ್ತಿ ಕೂಡ ಅಜಿಲ ವಂಶದ ಅರಸರ ಸಾಹಿತ್ಯ ಶಿಲ್ಪಕ್ಕೆ ಸಾಕ್ಷಿಯಾಗಿದೆ. (ಮಾನತುಂಗ - ಸಂ. ಡಾ। ಎಸ್. ಡಿ. ಶೆಟ್ಟಿ ಪು. ೧೯೩) ಪೋರ್ಚುಗೀಸ್ ದಾಖಲೆಗಳಲ್ಲಿ ಉಕ್ತವಾಗಿರುವಂತೆ, ಕ್ರಿ.ಶ. ೧೬೨೯ರ ಸುಮಾರಿಗೆ ಇವರು ಕೆಳದಿ ದೊರೆಗಳ ವಿರುದ್ಧ ಹೋರಾಟ ನಡೆಸಬೇಕಾಗಿ ಬಂದದ್ದರಿಂದ, ಯುದ್ಧದಲ್ಲಿ ಸೋತು, ತಮ್ಮ ರಾಜ್ಯವನ್ನು ಕಳೆದುಕೊಳ್ಳಬೇಕಾಯಿತು. ಅನಂತರ ಹಾಗೂ ಹೀಗೂ ಜೀವ ಹಿಡಿದುಕೊಂಡಿದ್ದ ಈ ಅರಸುಮನೆತನದವರನ್ನು ಹೈದರ್‌ಆಲಿ ಮತ್ತು ಟಿಪ್ಪು ಸುಲ್ತಾನರು ಸಂಪೂರ್ಣವಾಗಿ ನಾಶಪಡಿಸಿದರು. ಆದರೂ ಗೊಮ್ಮಟನ ಮೂರ್ತಿಯು ಅವರು ನೀಡಿದ ಕೊಡುಗೆಯಾಗಿ ಇಂದಿಗೂ ಜೀವಂತವಾಗಿದೆ.

ಧರ್ಮಸ್ಥಳದ ಗೊಮ್ಮಟನ ಮೂರ್ತಿಯು ತೀರಾ ಇತ್ತೀಚಿನ ಮೂರ್ತಿಯಾಗಿದೆ. ಶ್ರೀಕ್ಷೇತ್ರ ಧರ್ಮಸ್ಥಳಕ್ಕೆ ಸುಮಾರು ೮೦೦ ವರ್ಷಗಳ ಭವ್ಯ ಇತಿಹಾಸವಿದೆ. ಹಿಂದೆ ಹಳ್ಳಿಗಾಡಾಗಿದ್ದ ಈ ಪ್ರದೇಶವು 'ಕುಡುಮ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ವಿವಿಧ ಧರ್ಮಗಳ ಜೊತೆಗೆ ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿಗಳ ನೆಲೆವೀಡು ನಮ್ಮ ಸಮೃದ್ಧ ಕನ್ನಡ ನಾಡು. ಈ ನಾಡಲ್ಲಿ ಸರ್ವಧರ್ಮಗಳ ಸಾರವನ್ನೂ ಭಾರತೀಯ ಸಂಸ್ಕೃತಿಯ ಮೌಲ್ಯಾದರ್ಶಗಳನ್ನೂ ತನ್ನದಾಗಿಸಿಕೊಂಡು ಸದ್ದುಗದ್ದಲವಿಲ್ಲದೆ ಧರ್ಮ ಸಮನ್ವಯತೆಯನ್ನು ಸಾರುವ ಧರ್ಮಸ್ಥಳ ಸಣ್ಣ ಊರಾದರೂ, ಚಾರಿತ್ರಿಕ ಹಿನ್ನೆಲೆಯುಳ್ಳ ಪವಿತ್ರ ಧಾರ್ಮಿಕ ಕೇಂದ್ರ, ನಾಡಿನ ಒಳಗೂ ಹೊರಗೂ ಧರ್ಮ - ಧ್ವಜವನ್ನು ಮುಗಿಲೆತ್ತರಕ್ಕೆ ಹಾರಿಸಿ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿದೆ.

ಈ ಕ್ಷೇತ್ರವು ಧಾರ್ಮಿಕ, ಸಾಂಸ್ಕೃತಿಕ ಪರಂಪರೆಗಳ ಪ್ರತೀಕ ಕೂಡ. ಧರ್ಮ ತತ್ವಗಳ ಅನುಷ್ಠಾನ - ಆಚರಣೆಯೇ ಈ ಕ್ಷೇತ್ರದ ತಳಹದಿ. ಇಲ್ಲಿ ಮಾತಿಗೆ ಬೆಲೆ ನುಡಿದಂತೆ ನಡೆಯಬೇಕು. ಸತ್ಯ ಧರ್ಮಗಳನ್ನು ಕಾಪಾಡಬೇಕು. ಮಾತಿನ ಕೃತಿ

ರೂಪದ ಅನುಷ್ಠಾನಕ್ಕೆ ಇಲ್ಲಿ ಪ್ರಾಧಾನ್ಯತೆ. ಇದು ಇಲ್ಲಿ ನಡೆದು ಬಂದ ಪರಂಪರೆ. ಯಾತ್ರಾರ್ಥಿಗಳಿಗೆ ಇದರ ರಸಪೂರ್ಣ ಅನುಭವ ಆಗಿಯೇ ಆಗುತ್ತದೆ. ಎಂತಹ ದುಗುಡ-ದುಮ್ಮಾನಗಳಿದ್ದರೂ ತಾನಾಗಿಯೇ ಮರೆತು ಭಾವೋದ್ದೀಪನವಾಗುವಂತೆ ಮಾಡುವ ಸೌಹಾರ್ದ ವಾತಾವರಣ ಇಲ್ಲಿಯದು. ಇಲ್ಲಿ ಶ್ರೀ ಮಂಜುನಾಥ, ಶ್ರೀ ಚಂದ್ರನಾಥ, ಹಾಗೂ ಧರ್ಮದೇವತೆಗಳು ಆರಾಧ್ಯ ದೈವಗಳು ಮಂಜುನಾಥ (ಶಿವ) ಅರ್ಚಕರು ವೈಷ್ಣವರು. ಧರ್ಮಾಧಿಕಾರಿಗಳು ಜೈನ ಮತಾವಲಂಬಿಗಳಾದ ಹೆಗ್ಗಡೆಯವರು, ಆದುದರಿಂದಲೇ ಇಲ್ಲಿ ಮತ-ಪಂಥಗಳ ಭೇದವಿಲ್ಲ. ಸರ್ವರಿಗೂ ಸಮಾನಾವಕಾಶ ಇರುವ ಸರ್ವ ಧರ್ಮ ಸಮನ್ವಯ ಕ್ಷೇತ್ರ.

ಈ ಹಿಂದೆ ಕಾರ್ಕಳ ಮತ್ತು ವೇಣೂರಿನಲ್ಲಿ ನಡೆದ ಬಾಹುಬಲಿಯ ಮಹಾಮಸ್ತಕಾಭಿಷೇಕಗಳಿಗೆ ಹೆಗ್ಗಡೆ ಕುಟುಂಬದವರು ಪಾಲ್ಗೊಂಡು ಮಾರ್ಗದರ್ಶನ ನೀಡಿದ್ದರು. ವಿವಿಧ ದ್ರವ್ಯಗಳಿಂದ ಅಭಿಷೇಕ ನಡೆದಾಗ ಅದರಿಂದ ಪುಳಕಿತಗೊಂಡು ಪ್ರಭಾವಿತರಾದ ಹೆಗ್ಗಡೆ ಮನೆತನದವರು ನಮ್ಮ ಕ್ಷೇತ್ರದಲ್ಲೂ ಬಾಹುಬಲಿಯ ಮೂರ್ತಿಯನ್ನು ಏಕೆ ಸ್ಥಾಪಿಸಬಾರದು? ಎಂದು ಯೋಚಿಸಿದರು. ಮೂರ್ತಿ ಶಿಲ್ಪದ ಕೆತ್ತನೆಗೆ ಬೇಕಾದ ಏಕಶಿಲಾ ಕಲ್ಲು ಕಾರ್ಕಳದ ಬಳಿ ಇರುವ ಮಂಗಳ ಪಾದೆ ಎಂಬಲ್ಲಿಗೆ ಹೋಗಿ ಮೂರ್ತಿ ನಿರ್ಮಾಣದ ಕೆಲಸವನ್ನು ರೆಂಜಾಳ ಗೋಪಾಲಕೃಷ್ಣ ಶೆಣೈಗೆ ಒಪ್ಪಿಸಿ ತಮ್ಮ ಕನಸನ್ನು ನನಸನ್ನಾಗಿ ಮಾಡಿದರು.

ಮೂರ್ತಿ ಪೂಜೆ ಮಾನವ ಜನಾಂಗದ ನಂಬಿಕೆಯ ಒಂದು ಅಂಗವಾಗಿದೆ. ಈ ದೃಷ್ಟಿಯಿಂದ ಮೂರ್ತಿ ನಿರ್ಮಾಣ ಕಲೆಯು ಧಾರ್ಮಿಕ ಭಾವನೆಯಿಂದ ಸೃಷ್ಟಿಗೊಂಡಿತು. ನಮ್ಮ ದೇಶದಲ್ಲಿ ಮೂರ್ತಿ ಶಿಲ್ಪವು ವಾಸ್ತುಶಿಲ್ಪದ ಜೊತೆಜೊತೆಯಲ್ಲಿಯೇ ಬೆಳೆದುಬಂದಿದೆ. ವಾಸ್ತುಶಿಲ್ಪವು ದೇವರಿಗೆ ಆಲಯವನ್ನು ಕಟ್ಟಿದರೆ, ಮೂರ್ತಿಶಿಲ್ಪವು ಆ ದೇವರುಗಳ ಕಲ್ಪನೆಗೆ ಸಾಂಕೇತಿಕವಾದ ವ್ಯಕ್ತರೂಪವನ್ನು ಕೊಡಲು ಪ್ರಯತ್ನಿಸುತ್ತದೆ.

ಶಾಸ್ತ್ರ ರೀತಿಯಲ್ಲಿ ನಿರ್ಮಿಸಿದ ವಿಗ್ರಹಗಳಿಂದ ಅಭ್ಯುದಯ, ಮೋಕ್ಷವುಂಟಾಗುವುದೆಂಬ ಶ್ರದ್ಧೆಯು ಮೂರ್ತಿ ಶಿಲ್ಪಕ್ಕೆ ಮಹತ್ವವನ್ನು ತಂದುಕೊಟ್ಟಿತು. ಮೂರ್ತಿಗಳಲ್ಲಿರಬೇಕಾದ ಸೌಂದರ್ಯ, ಕೇವಲ ಕಲಾತ್ಮಕವಾದ ಸೌಂದರ್ಯವಲ್ಲ; ದೈವೀಶಕ್ತಿಯ ಆಹ್ವಾನ ಮತ್ತು ಆವಿರ್ಭಾವಕ್ಕೆ ಅವಶ್ಯಕವಾದ ದೈವೀಕಳೆಯೆಂಬ ನಂಬಿಕೆಯು ಹೆಚ್ಚಿದಾಗ, ಮೂರ್ತಿಶಿಲ್ಪದಲ್ಲಿ ಅನೇಕ ರೀತಿಯ ವೈವಿಧ್ಯತೆಗಳು ಮೂಡಿಬಂದವು.

ತುಳುನಾಡಿನಲ್ಲಿ ಗೊಮ್ಮಟನ ಭವ್ಯವಾದ ಕಲ್ಲಿನ ಮೂರ್ತಿಗಳು ಅಲ್ಲದೆ, ಲೋಹದ ಪ್ರತಿಮೆಗಳು ಕೂಡ ಇವೆ. ಮೂಡಬಿದ್ರೆಯ ಸಾವಿರ ಕಂಬದ ಬಸದಿಯ ಒಳಗೆ ನಾಲ್ಕೂವರೆ ಅಡಿ ಎತ್ತರದ ಲೋಹದ ಬಾಹುಬಲಿಯ ಪ್ರತಿಮೆ ಇದೆ. ಹಾಗೆಯೇ ಬೆಳ್ತಂಗಡಿ ತಾಲೂಕಿನ ಬಂಗ್ವಾಡಿ ಎಂಬಲ್ಲಿ ಪ್ರಾಚೀನ ಜಿನಾಲಯವಿದೆ. ಈ ಬಸದಿಯ ಒಳಗೆ ಎರಡು ಸುಂದರ ಲೋಹದ (೧೫ ಅಂಗುಲ) ಮೂರ್ತಿಗಳಿವೆ. ಇವುಗಳ ಹಿಂಬದಿಯಲ್ಲಿ ಶಾಸನವಿದೆ. ಇವು ವಿಜಯನಗರ ಕಾಲದ ಚೆಲುವಾದ ಪ್ರತಿಮೆಗಳು. ಹೀಗೆ ಹತ್ತಾರು ಬಸದಿಗಳಲ್ಲಿ ಜಿನಬಿಂಬಗಳ ಸಂಗಡ ಬಾಹುಬಲಿಯ ಬಿಂಬವೂ ಕಂಡು ಬಂದಿರುವುದನ್ನು ಗಮನಿಸಲಾಗಿದೆ.

ತುಳುನಾಡಿನ ಮಟ್ಟಿಗೆ ರಾಜಧರ್ಮವೆಂದರೆ, ಜೈನಧರ್ಮ. ಇದು ಸಂಕುಚಿತವಾದ ಏಕಾಂತ ದೃಷ್ಟಿಯನ್ನಿಟ್ಟುಕೊಳ್ಳದೆ, ವಿಶಾಲ ಮನೋಧರ್ಮವುಳ್ಳ ಮತ್ತು ತನ್ನ ಮೂಲಸಿದ್ಧಾಂತಕ್ಕೆ ಬದ್ಧವಾದ ದೃಷ್ಟಿಯನ್ನಿಟ್ಟುಕೊಂಡಿದೆ. ಇದನ್ನು ತುಳುನಾಡಿನಲ್ಲಿ ಪ್ರಾಯೋಗಿಕವಾಗಿ ನಡೆದು ತೋರಿಸಿತು. ಇಲ್ಲಿಯ ಯಾವುದೇ ಧರ್ಮ, ಜಾತಿಗಳೊಡನೆ ಪೈಪೋಟಿಗಾಗಲೀ, ಘರ್ಷಣೆಗಾಗಲೀ, ಇಳಿಯದೆ, ಐಕ್ಯ - ಮೈತ್ರಿ - ವಿಶ್ವಾಸಗಳ ಮೂಲಕವಾಗಿ ಜನರ ಮನಸ್ಸನ್ನು ಗೆದ್ದುಕೊಳ್ಳುವಲ್ಲಿ ಇದು ಸಹಕಾರಿಯಾಯಿತು. ಹೀಗಾಗಿ ಇಲ್ಲಿಯ ಶೈವ, ವೈಷ್ಣವ, ಧರ್ಮಗಳೊಡನೆ ಮುಕ್ತವಾಗಿ ಕಲೆತು ಉನ್ನತ ಸ್ತರದಲ್ಲಿ ಹೊಂದಾಣಿಕೆಯನ್ನು ಮಾಡಿಕೊಂಡಿತು. ಇಲ್ಲಿಯ ಅನೇಕ ಜಾನಪದೀಯ ನಂಬಿಕೆಗಳನ್ನು ಪುರಸ್ಕರಿಸಿದ ಜೈನಧರ್ಮವು, ಭೂತಾರಾಧನೆಯನ್ನು ಕೂಡ ಸಮ್ಯಕ್ತ್ವಕ್ಕೆ ವಿರೋಧವಾದ ಮಿಥ್ಯಾದೃಷ್ಟಿಯೆಂದು ಅಲ್ಲಗಳೆಯದೆ ತೀರ್ಥಂಕರ ಭಕ್ತಿಯ ಜೊತೆ ಜೊತೆಗೆ ಸಮಾನವಾಗಿ ಸ್ವೀಕರಿಸಿತು. ಇದು ತುಳುನಾಡಿನಲ್ಲಿ ಜೈನ ಧರ್ಮವು ಸಾಧಿಸಿದ ಉತ್ತಮ ಸಾಧನೆಯೆನ್ನಬಹುದು. ಏಕೆಂದರೆ, ಕರ್ನಾಟಕದ ಇತರ ಭಾಗಗಳಲ್ಲಿ ಜೈನಧರ್ಮದ ವಿನಾಶಕ್ಕೆ ಕಾರಣವಾದ ಈ ಅಂಶಗಳು ತುಳುನಾಡಿನಲ್ಲಿ ಯಾವ ಪರಿಣಾಮವನ್ನೂ ಬೀರಲಿಲ್ಲ. ಕೆಳದಿಯ ರಾಜರ ಆಕ್ರಮಣಕ್ಕೆ ಇಲ್ಲಿಯ ಜೈನ ಅರಸರು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿರುವುದಕ್ಕೆ ಧಾರ್ಮಿಕ ಕಾರಣಗಳಿಗಿಂತಲೂ ಭಿನ್ನವಾದ ರಾಜಕೀಯ ಕಾರಣಗಳಿದ್ದವು.

ಹೀಗೆ ತುಳುನಾಡಿನಲ್ಲಿ ಜೈನಧರ್ಮವು ತನ್ನದೇ ಆದ ವಿನೂತನ ಮಾರ್ಗವೊಂದನ್ನು ನಿರ್ಮಿಸಿಕೊಂಡಿದೆ. ಸ್ಥಳೀಯ ಸಂಸ್ಕೃತಿಯ ಪ್ರವಾಹದ ಸೆಳೆತದಲ್ಲಿ ತನ್ನ ಅಸ್ತಿತ್ವವನ್ನುಳಿಸಿಕೊಂಡು ಮುನ್ನಡೆಯುತ್ತ ಸಾಗಿದೆ. ಆಗಾಗ ಏರಿಳಿತಗಳನ್ನನುಭವಿಸುತ್ತ ಸುತ್ತಲಿನ ವೈರುಧ್ಯಗಳ ನಡುವೆಯೂ ತನ್ನ ಕ್ರಿಯಾಶೀಲತೆಯನ್ನೂ ಸೃಜನಾತ್ಮಕತೆಯನ್ನೂ ಉಳಿಸಿ ಬೆಳೆಸಿಕೊಂಡು ಬಂದಿರುವುದು ಮಹತ್ವದ ವಿಷಯ. ತುಳು ಸಂಸ್ಕೃತಿಯ ಮೇಲೆ ಲಗ್ಗೆಯಿಟ್ಟು ವಸಾಹತು ಸಂಸ್ಕೃತಿಯ ಹಾದಿಯನ್ನು ತುಳಿಯದೆ, ತುಳು ಸಂಸ್ಕೃತಿಯ ಕೈ ಹಿಡಿದು ನಡೆಯುತ್ತ ಜನಪರವಾಗಿ ಮತ್ತು ಮಾನವೀಯವಾಗಿ ನಡೆದು ತೋರಿತು. ಯಾವುದೇ ಒತ್ತಡಗಳಿಗೆ ಮಣಿಯದೆ ಸ್ಥಳೀಯ ಸಂಸ್ಕೃತಿಯೊಡನೆ ಧನಾತ್ಮಕವಾಗಿ ಸ್ಪಂದಿಸಿತು; ಹಾಗೂ ಅನನ್ಯವಾಗಿ ಬೆರೆತು ತನ್ನಲ್ಲಿರುವ ಉತ್ತಮಾಂಶಗಳನ್ನು ಧಾರೆಯೆರೆದು, ಅವುಗಳಲ್ಲಿರುವ ಉತ್ತಮಾಂಶಗಳನ್ನು ಮುಕ್ತವಾಗಿ ಸ್ವೀಕರಿಸಿತು. ತಾನೂ ಬೆಳೆದು ಅನ್ಯ ಸಂಸ್ಕೃತಿಯ ಬೆಳವಣಿಗೆಗೂ ನೆರವಾಯಿತು. ಸರ್ವಧರ್ಮ ಸಹಿಷ್ಣುತೆ, ಪರಸ್ಪರ ಸೌಹಾರ್ದ ಪ್ರೀತಿ, ವಿಶ್ವಾಸಗಳ ಆಲಿಂಗನದ ಮೂಲಕ ತುಳು ಜನಾಂಗದ ಹೃದಯವನ್ನು ಕೊಳ್ಳೆಹೊಡೆದು ಗೆದ್ದಿರುವುದು ಸಣ್ಣ ವಿಷಯವೇನಲ್ಲ. ಇಂದು ಸಂಖ್ಯಾ ದೃಷ್ಟಿಯಿಂದ ಜೈನಧರ್ಮವು ತುಳುನಾಡಿನಲ್ಲಿ ಕ್ಷೀಣಿಸಿದೆಯೆಂದು ತೋರಿದರೂ ಸಾಂಸ್ಕೃತಿಕವಾಗಿ ಜೈನ ಪ್ರಭಾವವು ಕುಂದಿಲ್ಲ. ಅದಕ್ಕೆ ಉನ್ನತವಾದ ಸ್ಥಾನ, ಘನತೆಗಳು ಇದ್ದೇ ಇದೆ. ಇದು ತುಳುನಾಡಿನಲ್ಲಿ ಜೈನಧರ್ಮವು ಸಾಧಿಸಿದ ಹೆಗ್ಗಳಿಕೆಯೆನ್ನಬಹುದು.

# ಪರಾಮರ್ಶನ ಗ್ರಂಥಗಳು

೧. ಚದುರ ಚಂದ್ರಮ ವಿರಚಿತ ಗ್ರಂಥ ಪರಿಷ್ಕರಣೆ ಡಾ। ಎಸ್. ಡಿ. ಶೆಟ್ಟಿ

೨. ಶುಭಚಂದ್ರ - ಶ್ರವಣಬೆಳಗೊಳ ಮತ್ತು ಗೋಮಟೇಶ್ವರ.

೩. ಕಾರ್ಕಳ - ಒಂದು ಪ್ರಾದೇಶಿಕ ಅಧ್ಯಯನ ( ರಜತೋತ್ಸವ - ಸಮಿತಿ ಶ್ರೀಭುವನೇಂದ್ರ ಕಾಲೇಜು, ಕಾರ್ಕಳ )

೪. ತುಳುನಾಡಿನ ಜೈನಧರ್ಮ. ಒಂದು ಸಾಂಸ್ಕೃತಿಕ ಅಧ್ಯಯನ - ಡಾ। ಎಸ್. ಡಿ. ಶೆಟ್ಟಿ.

೫. ವೇಣೂರಿನ ಅಜಿಲರು ( ಡಾ। ಪದ್ಮಪ್ರಸಾದ್ ಅಜಿಲರು ಅಳದಂಗಡಿ)

೬. ಶ್ವೇತಾಂಬರ ಸಾಹಿತ್ಯದಲ್ಲಿ ಬಾಹುಬಲಿ - ನಾಗೇಂದ್ರಕುಮಾರ್

೭. ಸಂಸ್ಕೃತ ವಾಙ್ಮಯಕ್ಕೆ ಜೈನಕವಿಗಳ ಕಾಣಿಕೆ - ಪಂಡಿತ ಕೆ. ಭುಜಬಲ ಶಾಸ್ತ್ರಿ.

೮. ಪಾರ್ಶ್ವನಾಥ - ಕನ್ನಡ ಸಾಹಿತ್ಯದಲ್ಲಿ - ಎಂ.ಎ ಜಯಚಂದ್ರ

೯. ಮಹಾಪುರಾಣ ಪರ್ವ ೧, ಪದ್ಯ ೧೮೪ ಕನ್ನಡ ಅನುವಾದ - ಶಾಂತಿರಾಜ ಶಾಸ್ತ್ರಿ.

೧೦. ಕಾರ್ಕಳದ ಕವಿ ಚದುರಚಂದ್ರಮ ವಿರಚಿತ, 'ಗೋಮಟೇಶ್ವರ ಚರಿತ್ರೆ' ಗ್ರಂಥ ಪರಿಷ್ಕರಣೆ - ಡಾ। ಎಸ್. ಡಿ. ಶೆಟ್ಟಿ.

೧೧. ವಿಜಯ ಕರ್ನಾಟಕ ದಿನಪತ್ರಿಕೆ - ಜನವರಿ ೭, ೨೦೦೦.

೧೨. 'ಬಾಹುಬಲಿ ಜಿನ' - ಪ್ರಾಕೃತ ಸಾಹಿತ್ಯದಲ್ಲಿ ಪುಟಸಂಖ್ಯೆ - ೧೪-೨೦ - ಎಂ. ಡಿ. ವಸಂತರಾಜ್

೧೩. ಶುಭಚಂದ್ರ - 'ಶ್ರವಣಬೆಳಗೊಳ ಮತ್ತು ಗೊಮ್ಮಟೇಶ್ವರ' ಪುಟಸಂಖ್ಯೆ - ೭೪ - ೭೮

೧೪. ಎಂ.ಎ. ಜಯಚಂದ್ರ 'ಜೈನಸಾಹಿತ್ಯ ಮತ್ತು ಸಂಸ್ಕೃತಿ' ಕೆಲವು ಅಧ್ಯಯನಗಳು ಪುಟ ಸಂಖ್ಯೆ ೭೦ - ೭೬ (೧೯೭೬)

೧೫. ಧರ್ಮ ನಡಾವಳಿ - ಅನನ್ಯ ಕ್ಷೇತ್ರ - ಧರ್ಮಸ್ಥಳ - ಪ್ರೊ। ಎಸ್. ಪ್ರಭಾಕರ್

೧೬. ಭುವನವಾಹಿನಿ ತ್ರೈಮಾಸಿಕ ಪತ್ರಿಕೆ ೨೦೦೮ - ೨೦೦೯ ವೇಣೂರು, ದ.ಕ.

೧೭. ಜೈನಾಚಾರ - ಏಲಾಚಾರ್ಯ - ವಿದ್ವಾನಂದ ಮುನಿಮಹಾರಾಜರು

೧೮. ಜೈನಾಗಮ - ವರ್ಧಮಾನ ಶಾಸ್ತ್ರಿ - ಬಜಗೋಳಿ - ಕಾರ್ಕಳ.

೧೯. ಪಂ. ವರ್ಧಮಾನ ಶಾಸ್ತ್ರಿ ಸೊಲ್ಲಾಪುರ - ಸಿರಿಬಾಹುಬಲಿ (ಪುಟ ಸಂಖ್ಯೆ ೨೩ - ೩೦)

೨೦. ಆರೋಹಣ (ಶ್ರೀ ವೀರೇಂದ್ರ ಹೆಗ್ಗಡೆಯವರ ಅಭಿನಂದನ ಗ್ರಂಥ) ಪ್ರ.ಸಂ.ಪ್ರೊ.ಎಸ್. ಪ್ರಭಾಕರ ಮತ್ತು ಪ್ರೊ.ಎನ್. ವಜ್ರಕುಮಾರ, ಪಟ್ಟಾಭಿಷೇಕ ದಶಮಾನೋತ್ಸವ ಸಮಿತಿ, ಧರ್ಮಸ್ಥಳ, ೧೯೭೮

೨೧. ಕನ್ನಡ ಛಂದೋವಿಹಾರ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ, ಗೀತಾ ಬುಕ್ ಹೌಸ್, ಮೈಸೂರು, ೧೯೮೯.

೨೨. ಕನ್ನಡ ಸಾಹಿತ್ಯಕ್ಕೆ ಮೂಡಬಿದ್ರೆಯ ಕೊಡುಗೆ. ವೈ ಉಮಾನಾಥ ಶೆಣೈ, ಯುಗಪುರುಷ ಪ್ರಕಟನಾಲಯ, ಕಿನ್ನಿಗೋಳಿ -೫೭೪ ೧೫೦

೨೩. ಪಂಪ ಮಹಾಕವಿ ವಿರಚಿತ ಆದಿಪುರಾಣಂ, ಅನುವಾದ - ಶ್ರೀ ಕೆ.ಎಲ್. ನರಸಿಂಹ ಶಾಸ್ತ್ರಿ, ಕ.ಸಾ.ಪ., ಬೆಂಗಳೂರು, ೧೯೮೦.

೨೪. ಶಾಂತಿರಾಜ ಶಾಸ್ತ್ರಿಗಳ ಕೃತಿಗಳು : ಒಂದು ಅಧ್ಯಯನ , ಡಾ. ಸತ್ಯವತಿ, ಕ.ಸಾ.ಪ. ಬೆಂಗಳೂರು ೧೯೯೫.



ಇಕ್ಷು ರಸಾಭಿಷೇಕ (ಚಿತ್ರ - ೧)



ಅಕ್ಕಿ ಹಿಟ್ಟಿನ ಅಭಿಷೇಕ ( ಚಿತ್ರ - ೨ )



ಗಂಧಾಭಿಷೇಕ ( ಚಿತ್ರ - ೭ )



ಚಂದನಾಭಿಷೇಕ (ಚಿತ್ರ - ೬)



ಪುಷ್ಪವೃಷ್ಟಿ (ಚಿತ್ರ - ೮)

